ರಾಮಕೃಷ್ಣ ಮಹಾಸಂಘದ ಏಕೈಕ ಕನ್ನಡ ಮಾಸಪತ್ರಿಕೆ



# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

ಬುದ್ಧ ತೋರಿದ ಮಾರ್ಗ

14/-

ಮೇ-2014

ಮೇ 2014

ಸಂಪುಟ 15 ಸಂಚಿಕೆ 05

# ವಿವೇಕಪ್ರಭ
























**ವ್ಯವಸ್ಥಾಪಕ ಸಂಪಾದಕರು**

*ಸ್ವಾಮಿ ಮುಕ್ತಿದಾನಂದ*

**ಸಂಪಾದಕರು**

*ಸ್ವಾಮಿ ವೀರೇಶಾನಂದ*

**ನೆರವು:**

*ಆರ್. ಎಸ್. ಪೂರ್ಣಾನಂದ*
*ಎನ್. ಎಸ್. ಶಾರದಾಪ್ರಸಾದ್*
*ಡಾ. ಕೆ. ಎಲ್. ಪ್ರಸನ್ನಾಕ್ಷಿ*
*ಡಾ. ಎಚ್. ಪಾಂಡುರಂಗ ವಿಠಲ*
*ನರಸಿಂಹಮೂರ್ತಿ*

**ಅಕ್ಷರ ಜೋಡಣೆ**

*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**

*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



**E-mail:**
vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505


**ಮುಖಪುಟ:**
ಅಫಘಾನಿಸ್ಥಾನದ ಖೈಬರ್ ಕಣಿವೆಯ 'ಹಡ್ಡಾ' ಎಂಬಲ್ಲಿ ದೊರೆತ ಬುದ್ಧನ ವಿಗ್ರಹ

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.

– ಸ್ವಾಮಿ ವಿವೇಕಾನಂದ


**ಚಂದಾ ವಿವರ : ಬಿಡಿ ಪ್ರತಿ:** ₹ 14; **ವಾರ್ಷಿಕ:** ₹ 140; **ಮೂರು ವರ್ಷ:** ₹ 375; **ಆಜೀವ** (25 ವರ್ಷ): ₹ 3,000; **ಪೋಷಕ ಸಹಾಯಧನ:** ₹ 5,000 ಅಥವಾ ಹೆಚ್ಚು. **ವಿದೇಶಗಳಿಗೆ:** (ಏರ್‌ಮೇಲ್): **ವಾರ್ಷಿಕ:** $20; **ಮೂರು ವರ್ಷ:** $60; **ಆಜೀವ** (25 ವರ್ಷ): $300; **ಪೋಷಕ ಸಹಾಯಧನ:** $600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

# ಅವಿಸ್ಮರಣೀಯ ವಿಶೇಷ ಪ್ರವಾಸಗಳು -2014

Orchid
Travel & Tours

## 10 ದಿನಗಳ ಚೈನಾ, ಹಾಂಕಾಂಗ್, ಮಕಾವ್ ಪ್ರವಾಸ

(ಬೀಜಿಂಗ್, ಶಾಂಘೈ, ಮಕಾವ್)
ಆಕ್ರೋಬೆಟಿಕ್ ಶೋ, ಓಸಿಯನ್ ಪಾರ್ಕ್, ಬೀಜಿಂಗ್, ಶಾಂಘೈ
ಸಮ್ಮರ್ ಪ್ಯಾಲೇಸ್, ಮ್ಯೂಸಿಯಂ ಮತ್ತು ಇತರೆ
ಹೊರಡುವ ತಿಂಗಳು : 19 ಮೇ 2014

ಸಂಪರ್ಕಿಸಿ
9900080799
9900080793





## 13 ದಿನಗಳ ಕೈಲಾಸ ಮಾನಸ ಸರೋವರ ಯಾತ್ರೆ

ಬೆಂಗಳೂರಿನಿಂದ ಬೆಂಗಳೂರಿಗೆ ವಿಮಾನದಲ್ಲಿ
30,000 ರೂ. ಧನ ಸಹಾಯ ಕರ್ನಾಟಕ ಸರ್ಕಾರದ ವತಿಯಿಂದ
ಹೊರಡುವ ತಿಂಗಳು : ಮೇ, ಜೂನ್, ಜುಲೈ, ಆಗಸ್ಟ್

ಸಂಪರ್ಕಿಸಿ
9900080792
9900080799

## 7 ದಿನಗಳ ಸಿಂಗಾಪುರ – ಮಲೇಶಿಯ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್,
ಬರ್ಡ್‌ಪಾರ್ಕ್, ಸಾಂಗ್ ಆಫ್ ಸೀ
ಮಲೇಶಿಯ : ಕೌಲಲೊಂಪುರ್ ಸಿಟಿ ಟೂರ್, ಬಾಟು ಗುಹೆ,
ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಜುಹೊರ್‌ಬರ್ ಸಿಟಿ ಟೂರ್
ಹೊರಡುವ ತಿಂಗಳು : ಏಪ್ರಿಲ್, ಮೇ

ಸಂಪರ್ಕಿಸಿ
9900080796
9900080795





## 8 ದಿನಗಳ ಕಾಂಬೋಡಿಯಾ – ಥೈಲ್ಯಾಂಡ್ ಪ್ರವಾಸ

ಕಾಂಬೋಡಿಯಾ – ಸಿಯಾಮ್‌ರಿಪ್, ಅಂಕೂರ್‌ವಾಟ್, ಟೋನ್ ಸ್ಯಾಪ್
ಸರೋವರ, ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು,
ಥೈಲ್ಯಾಂಡ್ – ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ
ಬ್ಯಾಂಕಾಕ್ ಸಿಟಿ ಟೂರ್, ವಾಕರ್ ಸ್ಟ್ರೀಟ್
ಹೊರಡುವ ತಿಂಗಳು : ಏಪ್ರಿಲ್, ಮೇ

ಸಂಪರ್ಕಿಸಿ
9900080793
9900080799

## 6 ದಿನಗಳ ಶ್ರೀಲಂಕಾ ಪ್ರವಾಸ

ರಾಮಾಯಣ ಕಾಲದ ಸ್ಥಳ ವೀಕ್ಷಣೆ
ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ,
ಹನುಮಾನ್ ದೇವಸ್ಥಾನ ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು
ಹೊರಡುವ ತಿಂಗಳು : ಮೇ 5.

ಸಂಪರ್ಕಿಸಿ
9900080793
9900080795





## 15 ದಿನಗಳ ಗ್ರ್ಯಾಂಡ್ ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ,
ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರಿಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ,
ಹೊರಡುವ ತಿಂಗಳು : ಏಪ್ರಿಲ್, ಮೇ, ಜೂನ್

ಸಂಪರ್ಕಿಸಿ
9900080794
9900080797

Orchid Travel & Tours
# 98, 1st Floor, D.V.G. Road, Basavanagudi, Bangalore - 560 004.
www.orchidtours.net

Tel : 080-26670646
26621983, 26670647
26617178



## ಪ್ರಾರ್ಥನೆ
## ಶ್ರೀಬುದ್ಧದೇವ ಸ್ತೋತ್ರಮ್

**ನ ಬ್ರಹ್ಮಲೋಕೇ ನ ಚ ದೇವಲೋಕೇ**
**ನ ಯಕ್ಷಗಂಧರ್ವಮನುಷ್ಯಲೋಕೇ ।**
**ಲೋಕಸ್ಯ ಜಾತಿಜರಾಪನೇತಾ**
**ನಾನ್ಯೋಽಸ್ತಿ ತ್ವತ್ತೋ ಹಿ ಮನುಷ್ಯಚಂದ್ರ ॥೧॥**

ನರರ ಮಧ್ಯೆ ಚಂದ್ರಮನಂತೆ ಬೆಳಗುತ್ತಿರುವ ಹೇ ಬುದ್ಧ ದೇವ! ಬ್ರಹ್ಮಲೋಕದಲ್ಲಾಗಲಿ, ದೇವಲೋಕದಲ್ಲಾಗಲಿ, ಯಕ್ಷಗಂಧರ್ವ ಮನುಷ್ಯಲೋಕಗಳಲ್ಲಿ ಕೂಡ ನಿನ್ನನ್ನು ಬಿಟ್ಟರೆ, ಈ ಪ್ರಪಂಚದಲ್ಲಿನ ಹುಟ್ಟುಮುಪ್ಪುಗಳನ್ನು ಹೋಗಲಾಡಿಸುವವರು ಬೇರೊಬ್ಬರಿಲ್ಲವಷ್ಟೆ !

**ವಂದಿತಸ್ತ್ವಂ ಸುರೈಃ ಸೇಂದ್ರೈಃ ಋಷಿಭಿಶ್ಚಾಪಿ ಪೂಜಿತಃ ।**
**ವೈದ್ಯಃ ಸರ್ವಸ್ಯ ಲೋಕಸ್ಯ**
**ವಂದೇಽಹಮಪಿ ತ್ವಾಂ ವಿಭೋ ॥೨॥**

ಇಂದ್ರನೇ ಮೊದಲಾದ ದೇವತೆಗಳಿಂದ ನೀನು ವಂದಿತನು, ಋಷಿಗಳಿಂದ ಕೂಡ ಪೂಜಿತನು. ಹೇ ವಿಭೋ, ಸರ್ವಲೋಕದ ಭವರೋಗ ವೈದ್ಯನಾದ ನಿನಗೆ ನಾನು ವಂದಿಸುತ್ತೇನೆ.

**ಲೋಕೇ ಕ್ಲೇಶಾಗ್ನಿಸಂತಪ್ತೇ ಪ್ರಾದುರ್ಭೂತೋ ಮಹಾಹ್ರದಃ ।**
**ನಮೋಽಸ್ತು ಬೋಧಿಸತ್ತ್ವಾಯ ಸಂಬುದ್ಧಾಯ ನಮೋ ನಮಃ ॥೩॥**

ದುಃಖಾಗ್ನಿಯಿಂದ ಸಂತಪ್ತವಾಗಿರುವ ಈ ಲೋಕದಲ್ಲಿ ಮಹಾಸಾಗರದಂತೆ ಉದ್ಭವಿಸಿದ, ಸಂಬುದ್ಧನಾದ (ಪರಿಪೂರ್ಣ ಜ್ಞಾನವುಳ್ಳವನು) ಬೋಧಿಸತ್ತ್ವನಿಗೆ ಮತ್ತೆ ಮತ್ತೆ ನಮಸ್ಕಾರಗಳು.

**ಅಜ್ಞಾನತಿಮಿರೇ ಲೋಕೇ ಪ್ರಾದುರ್ಭೂತಃ ಪ್ರದೀಪಿಕಃ ।**
**ನಮೋಽಸ್ತು ಬೋಧಿಸತ್ತ್ವಾಯ**
**ಸಂಬುದ್ಧಾಯ ನಮೋ ನಮಃ ॥೪॥**

ಅಜ್ಞಾನದ ಗಾಢಾಂಧಕಾರದಲ್ಲಿ ಮುಳುಗಿರುವ ಈ ಲೋಕದಲ್ಲಿ ಉಜ್ವಲ ದೀಪದಂತೆ ಆವಿರ್ಭವಿಸಿದ ಸಂಬುದ್ಧನಾದ ಬೋಧಿಸತ್ತ್ವನಿಗೆ ಮತ್ತೆ ಮತ್ತೆ ನಮಸ್ಕರಿಸುತ್ತೇನೆ.

**ಶೋಕಸಾಗರಕಾಂತಾರೇ ಯಾನಶ್ರೇಷ್ಠ ಸ್ವರೂಪಕಃ ।**
**ನಮೋಽಸ್ತು ಬೋಧಿಸತ್ತ್ವಾಯ**
**ಸಂಬುದ್ಧಾಯ ನಮೋ ನಮಃ ॥೫॥**

ಅಪಾರ ಶೋಕದಿಂದ ತುಂಬಿರುವ ಜಗತ್ತೆಂಬ ಈ ಅರಣ್ಯದಲ್ಲಿ, ಶ್ರೇಷ್ಠಮಾರ್ಗವನ್ನು ತೋರುತ್ತಿರುವ ಸಂಬುದ್ಧನಾದ ಬೋಧಿಸತ್ತ್ವನಿಗೆ ಪುನಃ ಪುನಃ ನಮಸ್ಕರಿಸುತ್ತೇನೆ.

**ಕ್ಲೇಶಬಂಧಬದ್ಧಾನಾಂ ಪ್ರಾದುರ್ಭೂತಃ ಪ್ರಮೋಚಕಃ ।**
**ನಮೋಽಸ್ತು ಬೋಧಿಸತ್ತ್ವಾಯ ಸಂಬುದ್ಧಾಯ ನಮೋ ನಮಃ ॥೬॥**

ಕ್ಲೇಶಗಳೆಂಬ ಬಂಧನದಲ್ಲಿ ಸಿಲುಕಿರುವವರನ್ನು ವಿಮೋಚನೆಗೊಳಿಸಲೆಂದೇ ಜನಿಸಿರುವ ಸಂಬುದ್ಧನಾದ ಬೋಧಿಸತ್ತ್ವನಿಗೆ ಮತ್ತೆ ಮತ್ತೆ ನಮಸ್ಕರಿಸುತ್ತೇನೆ.

**ಜರಾವ್ಯಾಧಿಕಿಲ್ಬಿಷಾಣಾಂ ಪ್ರಾದುರ್ಭೂತೋ ಭಿಷಗ್ವರಃ ।**
**ನಮೋಽಸ್ತು ಬೋಧಿಸತ್ತ್ವಾಯ ಸಂಬುದ್ಧಾಯ ನಮೋ ನಮಃ ॥೭॥**

ಮುಪ್ಪು, ವ್ಯಾಧಿಗಳೆಂಬ ಆಪತ್ತುಗಳಿಗೆ ಶ್ರೇಷ್ಠವೈದ್ಯನಾಗಿ ಉದ್ಭವಿಸಿರುವ ಸಂಬುದ್ಧನಾದ ಬೋಧಿಸತ್ತ್ವನಿಗೆ ಬಾರಿಬಾರಿಗೂ ನಮಸ್ಕರಿಸುತ್ತೇನೆ.

## ಬುದ್ಧ ಸೂಕ್ತಿ – ಮನಸ್ಸು

**ಎ**ಲ್ಲ ಕರ್ಮಗಳ ಪೂರ್ವಭಾವಿ ರೂಪವೇ ಮನಸ್ಸು. ಎಲ್ಲ ಇಂದ್ರಿಯ ಸಾಮರ್ಥ್ಯಗಳಲ್ಲಿ ಮನಸ್ಸು ಅತ್ಯಂತ ಹೆಚ್ಚಿನದು. ಎಲ್ಲ ಸಾಪೇಕ್ಷ ಕಲ್ಪನೆಗಳೂ ಮನಸ್ಸಿನಲ್ಲೇ ಹುಟ್ಟುತ್ತವೆ.

**ಮ**ನಸ್ಸು ಎಲ್ಲ ಗ್ರಹಿಕೆಗಳಿಗೂ ಮೊದಲೇ ಬರುತ್ತದೆ. ಬಾಹ್ಯಪ್ರಪಂಚದ ಎಲ್ಲ ಭೂತವಸ್ತುಗಳಲ್ಲಿ ಅದು ಅತ್ಯಂತ ಸೂಕ್ಷ್ಮವಾದುದು. ಎಲ್ಲ ವಸ್ತುನಿಷ್ಠ ಪ್ರಜ್ಞೆಯ ಮೂಲ ಮನಸ್ಸಿನಲ್ಲಿದೆ. ಯಾರು ಶುದ್ಧ ಮನಸ್ಸಿನಿಂದ ಮಾತನಾಡುವರೋ ಹಾಗೂ ಕೆಲಸ ಮಾಡುವರೋ ಅವರಲ್ಲಿ ಆನಂದ ನೆಲಸಿರುತ್ತದೆ, ತನ್ನ ನೆರಳಿನಂತೆ.

**“ನ**ನ್ನನ್ನು ಎಲ್ಲರೂ ದ್ವೇಷಿಸುತ್ತಾರೆ, ಯಾರೂ ನನ್ನನ್ನು ನಂಬುವುದಿಲ್ಲ; ಎಲ್ಲರೂ ತಪ್ಪು ತಿಳಿಯುತ್ತಾರೆ ಹಾಗೂ ವಂಚಿಸುತ್ತಾರೆ” – ಹೀಗೆ ಯಾರು ಮನಸ್ಸಿನಲ್ಲಿ ಕೊರಗುತ್ತಿರುತ್ತಾರೋ, ಅವರು ನಾಶವನ್ನು ತರಬಲ್ಲ ಕಾರಣಗಳಿಂದ ಮುಕ್ತರಾಗುವುದಿಲ್ಲ.

**ತ**ನ್ನನ್ನೇ ತಾನು ಗೆದ್ದವನು ಸಾವಿರ ವೈರಿಗಳನ್ನು ಜಯಿಸಿದವನಿಗಿಂತಲೂ ಮಿಗಿಲಾದ ವೀರ. ತನ್ನ ಇಂದ್ರಿಯಗಳಿಗೆ ದಾಸನಾಗಿರುವವನಿಗಿಂತ ಅವನು ಸಾವಿರಪಾಲು ಶಕ್ತಿಶಾಲಿ.

**ಬಾ**ಹ್ಯಸೌಂದರ್ಯ ಹಾಗೂ ಅದ್ಭುತಗಳನ್ನು ಅರಸುವ ಮನಸ್ಸುಳ್ಳವನು, ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲಾಗದವನು, ಅಶುದ್ಧ ಆಹಾರವನ್ನು ಸೇವಿಸುವವನು, ನೈತಿಕ ಧೈರ್ಯವಿಲ್ಲದವನು ಹಾಗೂ ಸೋಮಾರಿಯಾದವನು – ಇಂತಹವನನ್ನು ಅಜ್ಞಾನ ದುಃಖಗಳು ಬಿರುಗಾಳಿಯು ಒಣಮರವನ್ನು ನಾಶಮಾಡುವಂತೆ, ನಾಶ ಮಾಡುವವು.

**ಮ**ನೆಗೆ ಹೆಂಚನ್ನು ಭದ್ರವಾಗಿ ಹೊದಿಸದಿದ್ದರೆ ಮಳೆಯ ಹನಿಗಳು ಒಳಕ್ಕೆ ಬೀಳುವಂತೆ ಆಸಕ್ತಿ, ದ್ವೇಷ, ಭ್ರಾಂತಿ – ಇವು ವ್ಯಕ್ತಿಕೇಂದ್ರಿತ ಧ್ಯಾನಕ್ಕೆ ವಿಮುಖವಾದ ಮನಸ್ಸನ್ನು ಪ್ರವೇಶಿಸುವುವು.

**ಯಾ**ರ ಮನಸ್ಸು ಕಾಮದಲ್ಲಿ ಮುಳುಗಿಹೋಗಿಲ್ಲವೋ, ಯಾರು ದ್ವೇಷದ ಪ್ರಭಾವಕ್ಕೆ ಒಳಗಾಗಿಲ್ಲವೋ, ಯಾರು ಒಳಿತು–ಕೆಡಕುಗಳನ್ನು ತ್ಯಜಿಸಿರುವನೋ, ಅಂಥ ಪ್ರಜ್ಞಾವಂತನಿಗೆ ಯಾವುದೇ ಭಯವಿಲ್ಲ.

**ಯಾ**ರ ಹೃದಯ ಅಜ್ಞಾನದ ಮಾರ್ಗವನ್ನು ಅನುಸರಿಸುವುದೋ ಅಂಥವನು, ಒಬ್ಬ ವ್ಯಕ್ತಿಗೆ – ಅವನ ಅತ್ಯಂತ ದ್ವೇಷಿಯಾದ ಕಡು ವೈರಿಗಿಂತಲೂ – ಹೆಚ್ಚಿನ ಹಾನಿಯನ್ನು ಉಂಟುಮಾಡುತ್ತಾನೆ.

**ನಿ**ಗ್ರಹಿಸಲು ಕಷ್ಟವಾದ, ರಕ್ಷಿಸಲು ಅಸಾಧ್ಯವಾದ ಚಂಚಲ ಮನಸ್ಸನ್ನು ವಿವೇಕಿಯು ನಿಯಂತ್ರಣದಲ್ಲಿಡುತ್ತಾನೆ.

**ಮ**ನಸ್ಸನ್ನು ನಿಗ್ರಹಿಸುವುದು ಕಷ್ಟ, ಅದು ಅತ್ಯಂತ ಸೂಕ್ಷ್ಮ, ಚುರುಕು ಹಾಗೂ ತಾನು ಬಾಗಿದಲ್ಲಿಗೆ ತಕ್ಷಣ ನೆಗೆಯುವಷ್ಟು ಚಂಚಲ. ಅದನ್ನು ನಿಗ್ರಹಿಸುವುದೇ ಸೂಕ್ತವಾದುದು. ಹಾಗೆ ನಿಗ್ರಹಿಸಲ್ಪಟ್ಟ ಮನಸ್ಸು ಆನಂದವನ್ನು ತರುವುದು.

**ತಂ**ದೆ, ತಾಯಿ ಅಥವಾ ಇತರ ಬಂಧುಗಳು ಏನನ್ನು ಮಾಡಲಾರರೋ, ಅದನ್ನು ಚೆನ್ನಾಗಿ ಹತೋಟಿಯಲ್ಲಿಟ್ಟಿರುವ ಮನಸ್ಸು ಮಾಡುವುದು. ಹಾಗೆ ನಿಯಂತ್ರಿಸಲ್ಪಟ್ಟ ಮನಸ್ಸು ಒಬ್ಬ ವ್ಯಕ್ತಿಯನ್ನು ಉನ್ನತಿಗೇರಿಸುವುದು.

**ಪ್ರ**ಜ್ಞೆ ಮೂಡಿದವನಿಗೆ ಭಯವಿಲ್ಲ.

**ಕೆ**ಡುಕನ್ನು ಮಾಡದಿರುವುದು, ಸತ್ಕರ್ಮಗಳನ್ನು ಮಾಡುವುದು, ತನ್ನ ಮನಸ್ಸಿನ ಶುದ್ಧೀಕರಣ – ಇದೇ ಬೌದ್ಧತತ್ತ್ವ

# ಶ್ರದ್ಧಾಂಜಲಿ

## ಶ್ರೀಮತ್ ಸ್ವಾಮಿ ಗೀತಾನಂದಜಿ ಮಹಾರಾಜ್



**ರಾ**ಮಕೃಷ್ಣ ಮಹಾಸಂಘದ ಉಪಾಧ್ಯಕ್ಷ ರಲ್ಲಿ ಒಬ್ಬರಾಗಿದ್ದ ಶ್ರೀಮತ್ ಸ್ವಾಮಿ ಗೀತಾನಂದಜಿ ಮಹಾರಾಜ್ ಅವರು ಮಾರ್ಚ್ ೧೪, ೨೦೧೪ ರಂದು ಮಹಾಸಮಾಧಿಯನ್ನು ಹೊಂದಿದರೆಂದು ತಿಳಿಸಲು ವಿಷಾದ ಪಡುತ್ತೇವೆ. ಅವರಿಗೆ ೯೦ ವರ್ಷ ವಯಸ್ಸಾಗಿತ್ತು. ಮಾರ್ಚ್ ೧೫ ರಂದು ಬೇಲೂರು ಮಠದ ಆವರಣದಲ್ಲಿ ಅವರ ಪಾರ್ಥಿವ ಶರೀರಕ್ಕೆ ಅಂತಿಮ ಸಂಸ್ಕಾರಗಳನ್ನು ಮಾಡಲಾಯಿತು.

ಸ್ವಾಮಿ ಗೀತಾನಂದಜಿಯವರು ಢಾಕಾ ಜಿಲ್ಲೆಯ (ಈಗ ಬಾಂಗ್ಲಾ ದೇಶದಲ್ಲಿದೆ) ಅರಿಯಾಲ್ ಎಂಬ ಗ್ರಾಮದಲ್ಲಿ ೧೯೨೪ನೇ ಇಸವಿಯ ಏಪ್ರಿಲ್ ೧೭ರಂದು ಜನಿಸಿದರು. ಅವರು ಸ್ವಾಮಿ ವಿರಜಾನಂದಜಿ ಮಹಾರಾಜರಿಂದ ಮಂತ್ರದೀಕ್ಷೆಯನ್ನು ಪಡೆದರು. ೧೯೪೬ರಲ್ಲಿ ಅವರು ಚೆನ್ನೈ ರಾಮ ಕೃಷ್ಣ ಮಠವನ್ನು ಸೇರುವ ಮೂಲಕ ರಾಮಕೃಷ್ಣ ಮಹಾಸಂಘವನ್ನು ಸೇರಿದರು. ಚೆನ್ನೈಯಲ್ಲಲ್ಲದೆ ಅವರು ಬೇಲೂರು ಮಠ, ಕಾನ್ಪುರಗಳಲ್ಲಿ ಸಹಾಯಕರಾಗಿ ಸೇವೆ ಸಲ್ಲಿಸಿದ್ದರು. ರಾಂಚಿ ಸ್ಯಾನಿಟೋರಿಯಂ ಹಾಗೂ ವಾರಣಾಸಿ ಸೇವಾಶ್ರಮಗಳಲ್ಲಿ ಮೊದಲಿಗೆ ಸಹಾಯಕರಾಗಿಯೂ, ಅನಂತರ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಅವರು ತಮ್ಮ ಜೀವಿತದ ಕೊನೆಯವರೆಗೂ ಕಾಂಕುರಗಾಚಿಯ ರಾಮಕೃಷ್ಣ ಮಠದ ಅಧ್ಯಕ್ಷರಾಗಿದ್ದರು. ರಾಮಕೃಷ್ಣ ಮಹಾಸಂಘದ ಅಧ್ಯಕ್ಷರಾಗಿದ್ದ ಸ್ವಾಮಿ ವಿರಜಾನಂದಜಿ ಮಹಾರಾಜ್ ಅವರಿಗೆ ಸೇವಕರಾಗಿಯೂ, ಸ್ವಾಮಿ ಶಂಕರಾನಂದಜಿ ಮಹಾರಾಜ್ ಅವರಿಗೆ ಕಾರ್ಯದರ್ಶಿಗಳಾಗಿಯೂ ಅವರು ಸೇವೆ ಸಲ್ಲಿಸಿದರು. ಇದಲ್ಲದೆ, ಅವರು ಸ್ವಾಮಿ ವಿವೇಕಾನಂದ ಶತಮಾನೋತ್ಸವ ಕಛೇರಿಯಲ್ಲಿಯೂ ನಾಲ್ಕು ವರ್ಷಗಳ ಕಾಲ ಸೇವೆ ಸಲ್ಲಿಸಿದರು.

೧೯೭೫ರಲ್ಲಿ ಪೂಜ್ಯರು ರಾಮಕೃಷ್ಣ ಮಠ ಮತ್ತು ಮಿಷನ್ನಿನ ಟ್ರಸ್ಟಿಗಳಾಗಿ ನೇಮಕಗೊಂಡರು. ೧೯೭೪ರ ಜುಲೈ ತಿಂಗಳಲ್ಲಿ ಅವರು ಮಠ – ಮಿಷನ್ನಿನ ಸಹ ಕಾರ್ಯದರ್ಶಿಗಳಾಗಿ ಮತ್ತು ೧೯೭೫ರಲ್ಲಿ ಅದರ ಕೋಶಾಧಿಕಾರಿಗಳಾಗಿ ನೇಮಕಗೊಂಡರು. ೨೦೦೫ರ ಏಪ್ರಿಲ್‌ನಲ್ಲಿ ಅವರು ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು. ಅವರು ತಮ್ಮ ಜೀವನದ ಕೊನೆಯವರೆಗೂ ಈ ಪದವಿಯನ್ನು ವಹಿಸಿಕೊಂಡರು.

ಪೂಜ್ಯ ಸ್ವಾಮಿ ಗೀತಾನಂದಜಿ ಮಹಾರಾಜ್ ಅವರು ದೇಶದ ಎಲ್ಲೆಡೆ ಸಂಚರಿಸಿ ಅಸಂಖ್ಯಾತ ಭಕ್ತರಿಗೆ ಮಂತ್ರದೀಕ್ಷೆ ನೀಡುವ ಮೂಲಕ ಅವರ ಆಧ್ಯಾತ್ಮಿಕ ಜಗತ್ತಿಗೆ ಬೆಳಕಾದರು. ಬಂಗಾಳಿ ಭಾಷೆಯಲ್ಲಿ ಅವರು ಎರಡು ಗ್ರಂಥಗಳನ್ನು ಬರೆದಿದ್ದಾರೆ: 'ಶ್ರೀರಾಮೇರ್ ಅನುಧ್ಯಾನ್' (ಶ್ರೀರಾಮಚಂದ್ರನನ್ನು ಕುರಿತ ಚಿಂತನೆ), 'ಭಾಗವತ್ ಕಥಾ' (ಶ್ರೀಮದ್ಭಾಗವತದ ಸಂಗ್ರಹ). ಪೂಜ್ಯ ಸ್ವಾಮೀಜಿಯವರು ಅತ್ಯಂತ ಸರಳ ಹಾಗೂ ಸ್ನೇಹಶೀಲ ವ್ಯಕ್ತಿತ್ವವನ್ನು ಹೊಂದಿದ್ದರು. ದೀರ್ಘಕಾಲ ಜಪ, ಧ್ಯಾನಗಳಲ್ಲಿ ಕಾಲ ಕಳೆಯುತ್ತಿದ್ದ ಅವರು ತಮ್ಮ ಕೊನೆಯ ದಿನಗಳಲ್ಲಿ ಸಂಪೂರ್ಣ ಅಂತರ್ಮುಖಿಯಾಗಿದ್ದರು. ಅವರು ಆಶ್ರಮದ ಸಾಧು, ಸಂನ್ಯಾಸಿಗಳಿಗೂ, ಭಕ್ತರಿಗೂ ತಮ್ಮ ಶಿಷ್ಯಂದಿರಿಗೂ ಸ್ಫೂರ್ತಿಯ ಸೆಲೆಯಾಗಿದ್ದರು.

ಅವರ ನಿಧನ ಅವರಿಗೆಲ್ಲ ತುಂಬಲಾರದ ನಷ್ಟವಾಗಿದೆ. ಅಗಲಿದ ಈ ಮಹಾಚೇತನಕ್ಕೆ 'ವಿವೇಕಪ್ರಭ'ವು ಭಾವಪೂರ್ಣ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ.



ಸಂಪಾದಕೀಯ

# ಬುದ್ಧ ತೋರಿದ ಮಾರ್ಗ

**ಬುದ್ಧನ ವ್ಯಕ್ತಿತ್ವ :** ಬೌದ್ಧಧರ್ಮದ ಅನುಯಾಯಿಗಳು ಬುದ್ಧನನ್ನು ಭಗವಂತನ ಅವತಾರವೆಂದು ಪರಿಗಣಿಸುವುದಿಲ್ಲ. ಅವನನ್ನು ಒಬ್ಬ ಮನುಷ್ಯನೆಂದೇ ಪರಿಗಣಿಸುತ್ತಾರೆ. ಅವರ ಪ್ರಕಾರ ಭಗವಾನ್ ಬುದ್ಧ ಒಬ್ಬ ಪುರುಷೋತ್ತಮ. ಇಂದ್ರಿಯ ಸಾಧಾರಣ ಮಾನವನೆಲೆಯಿಂದ ಅತೀಂದ್ರಿಯ ಸಿದ್ಧ ಅಥವಾ ಬೋಧಿನೆಲೆಗೆ ಏರಿದ ಮಹಾಪುರುಷನೀತ. ಮನುಷ್ಯನಾದರೂ ತನ್ನ ಅಮಾನುಷ ಸಾಮರ್ಥ್ಯದಿಂದ ಅತ್ಯಂತ ಉದಾತ್ತವಾದ ಬೌದ್ಧಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಸಿದ್ಧಿಯನ್ನು ಪಡೆದುಕೊಂಡ 'ಯುಗದ ಜ್ಯೋತಿ' ಅವನು. ನಿಷ್ಕಲಂಕ ಪವಿತ್ರತೆಯ ಶಿಖರದ ಆರೋಹಣವನ್ನು ಮಾಡಿದ 'ಸಿದ್ಧಾರ್ಥ' ನು ಉತ್ಕೃಷ್ಟ ಮಾನವೀಯ ಗುಣಗಳ ಪರಿಪೂರ್ಣಸ್ವರೂಪನಾದ 'ಬುದ್ಧ' ನೆಲೆಗೆ ಏರಿದ ವೃತ್ತಾಂತ ಅತ್ಯಂತ ರೋಚಕವಾದುದು. ಈ ತಥಾಗತನು 'ಕರುಣೆ' ಮತ್ತು 'ಪ್ರಜ್ಞೆ'ಗಳ ಮೂರ್ತರೂಪನು. ಇವೇ ಆತನ ಬೋಧನೆಗಳ ಬಹುಮುಖ್ಯ ಮಾರ್ಗದರ್ಶಿಸೂತ್ರಗಳು.

**ಸ್ವಾವಲಂಬನೆಯ ಪ್ರಗತಿಪರ ಧರ್ಮ:** ಬುದ್ಧನು ಯಾವತ್ತೂ ಮಾನವ ಜೀವನದ ಶ್ರೇಷ್ಠತೆಯನ್ನೇ ಪ್ರತಿಪಾದಿಸಿದನು. 'ನಿರ್ವಾಣ' ಅಥವಾ 'ಮೋಕ್ಷ' ಸಂಪೂರ್ಣವಾಗಿ ಮಾನವನ ಕೈಯಲ್ಲಿಯೇ ಇದೆ ಎಂದು ಅವನು ತನ್ನ ಸ್ವಂತ ಸಾಧನೆಯ ಮೂಲಕ ಸಮರ್ಥವಾಗಿ ಪ್ರದರ್ಶಿಸಿದನು. ಹಾಗೆಯೇ ಮಾನವರ ಅದೃಷ್ಟವನ್ನು ನಿಯಂತ್ರಿಸುವ ಯಾವುದೋ ಒಂದು ಅತೀಂದ್ರಿಯ ಶಕ್ತಿ ಅಥವಾ ಈಶ್ವರನ ಭಾವನೆಯನ್ನು, ಅದನ್ನು ಬರೀ ಭ್ರಮೆಯೆಂದು, ಸಂಪೂರ್ಣವಾಗಿ ತಿರಸ್ಕರಿಸಿದನು. ಇದಲ್ಲದೆ, ಬುದ್ಧನು ಸ್ವಾವಲಂಬನೆಯನ್ನು ಬೆಳೆಸಿಕೊಳ್ಳುವಂತೆ ತನ್ನ ಶಿಷ್ಯರನ್ನು ಉತ್ತೇಜಿಸಿದನು. ಅವನು ಕೇಳುವ ಪ್ರಶ್ನೆ ಇದು: "ನಿಮಗೆ ನೀವೇ ಆಶ್ರಯವಾಗಿದ್ದೀರಿ. ನಿಮ್ಮ ಆಶ್ರಯದಾತರು ಇನ್ನಾರು ತಾನೇ ಇದ್ದಾರೆ?" ಪ್ರತಿಯೊಬ್ಬನೂ ತಾನೇ ಸ್ವತಂತ್ರವಾಗಿ ದುಃಖನಿವಾರಣೆಯನ್ನು ಮಾಡಿಕೊಳ್ಳಬಹುದು; ಅದಕ್ಕಾಗಿ ದೇವರೆಂಬ ಬಾಹ್ಯ ಪ್ರಭಾವದ ಅಗತ್ಯವಿಲ್ಲ ಎಂದು ಬುದ್ಧ ಬೋಧಿಸುತ್ತಾನೆ; ಪ್ರತಿಯೊಬ್ಬನೂ ತನ್ನ ಕ್ರಿಯೆಗಳೆಂಬ ಉಳಿಪೆಟ್ಟುಗಳಿಂದ ಸ್ವಂತ ನಿರ್ವಾಣವನ್ನು ರೂಪಿಸಿಕೊಳ್ಳಬೇಕೆಂದು ಕರೆ ನೀಡುತ್ತಾನೆ.

**ಬೌದ್ಧಧರ್ಮದ ವೈಚಾರಿಕತೆ:** ಬುದ್ಧ ಬೋಧಿಸಿದ ತತ್ತ್ವ ಮತ್ತು ಸಾಧನಾಮಾರ್ಗವನ್ನು ಪಾಲಿ ಭಾಷೆಯಲ್ಲಿ ಧರ್ಮ-ವಿನಯ ಎನ್ನುತ್ತಾರೆ. ಬುದ್ಧನು ಯಾವ ರೀತಿಯ ರಹಸ್ಯ ವಿಚಾರ-ಆಚಾರವನ್ನೂ ಸಮ್ಮತಿಸಲಿಲ್ಲ. ಅವನು ಧರ್ಮವನ್ನು ಎಲ್ಲರಿಗೂ ಮುಕ್ತವಾಗಿ ಮತ್ತು ಸಮಾನವಾಗಿ ಬೋಧಿಸಿದನು. ಸತ್ಯವನ್ನು ವಿವೇಕಯುತವಾಗಿ ಪರೀಕ್ಷಿಸಬೇಕು, ಬುದ್ಧಿಯುಕ್ತವಾಗಿ ವಿಶ್ಲೇಷಿಸಬೇಕು ಮತ್ತು ವಿಮರ್ಶಾತ್ಮಕ ವಿಚಾರಣೆಗೆ ಒಳಪಡಿಸಬೇಕು ಎಂದು ಅವನು ತನ್ನ ಅನುಯಾಯಿಗಳನ್ನು ಪ್ರೇರೇಪಿಸಿದನು. ಈ ವಿಷಯದಲ್ಲಿ ಬುದ್ಧನು ಹೀಗೆ ಹೇಳುತ್ತಾನೆ: "ಬುದ್ಧಿವಂತನೊಬ್ಬನು ಚಿನ್ನವನ್ನು ಕುಲುಮೆಯ ಬೆಂಕಿಗೆ ಹಾಕುವ ಮೂಲಕ, ಬಳಿಕ ಕತ್ತರಿಸುವ ಮೂಲಕ ಅಥವಾ ಅದನ್ನು ಒರೆಗಲ್ಲಿನ ಮೇಲೆ ಉಜ್ಜುವ ಮೂಲಕ ಪರೀಕ್ಷಿಸುತ್ತಾನೆ. ಇದೇ ರೀತಿಯಲ್ಲಿ ನನ್ನ ಮಾತುಗಳನ್ನು ಕೂಲಂಕಷವಾಗಿ ಪರೀಕ್ಷಿಸಿದ ನಂತರವೇ ಅವನ್ನು ನೀವು ಒಪ್ಪಿಕೊಳ್ಳಬೇಕೇ ಹೊರತು, ಕೇವಲ ನನ್ನ ಮೇಲಿನ ಗೌರವಕ್ಕಾಗಿ ಅಲ್ಲ."

**ಆಲೋಚನೆಯ ಸ್ವಾತಂತ್ರ್ಯ:** ಬುದ್ಧನು ಮತ್ತೊಬ್ಬ ವ್ಯಕ್ತಿಯ ಆಲೋಚನಾಸ್ವಾತಂತ್ರ್ಯದ ವಿಷಯದಲ್ಲಿ ಎಂದಿಗೂ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ವೈಯಕ್ತಿಕ ವೈಚಾರಿಕ ಸ್ವಾತಂತ್ರ್ಯಕ್ಕೆ ಧಕ್ಕೆ ತರುವ ಯಾವುದೇ ರೀತಿಯ ಅಧಿಕಾರಶಾಹಿ ಅಥವಾ ಬಾಹ್ಯ ಒತ್ತಡವನ್ನು ಅವನು ಕಟುವಾಗಿ ವಿರೋಧಿಸುತ್ತಿದ್ದನು. ಬೌದ್ಧಿಕ ಚಿಂತನೆಯಲ್ಲಿ ವಾಸ್ತವಿಕ ಅರಿವು ಅಥವಾ ಪ್ರಜ್ಞೆಗೇ ಸಂಪೂರ್ಣ ಮಹತ್ವವನ್ನು ನೀಡಬೇಕೇ ಹೊರತು, ಯಾವುದೇ ತೆರನಾದ ನಂಬಿಕೆ ಅಥವಾ ಭಯಭಾವನೆಗಲ್ಲ ಎಂಬುದು ಅವನ ಸ್ಪಷ್ಟ ನಿಲುವಾಗಿತ್ತು. 'ಧರ್ಮ'ದ ಸಾರಸತ್ವವಾದ 'ಸತ್ಯ'ವು ಅಂತರ್ದೃಷ್ಟಿಯಿಂದ ಮಾತ್ರವೇ ಗ್ರಾಹ್ಯವಾಗುವಂಥದ್ದು. ಹೀಗೆ ಬುದ್ಧನು ಎಲ್ಲ ಬಗೆಯ ಮೂಢಾಚರಣೆಗಳು, ಕ್ರೌರ್ಯ, ಶೋಷಣೆ ಮತ್ತು ಬಲಾತ್ಕಾರಗಳಿಂದ ಮುಕ್ತವಾದ ಮುಕ್ತಿಮಾರ್ಗವನ್ನು ಬೋಧಿಸುತ್ತಾನೆ. ಇನ್ನಿತರ ಧರ್ಮಗಳಲ್ಲಿ ಈ ಬಗೆಯ ಕೆಡುಕುಗಳನ್ನು ನಾವು ಕಾಣುತ್ತೇವೆ. ಆದರೆ ಬೌದ್ಧಧರ್ಮದಲ್ಲಿ ಅಂಥ ಯಾವ ಕಳಂಕಗಳಿಗೂ ಅವಕಾಶವಿಲ್ಲ.

**ಬೌದ್ಧಧರ್ಮ ಎಂದರೆ ಏನು? :** ಸಾಮಾನ್ಯ ಅರ್ಥದಲ್ಲಿ ಯಾವುದನ್ನು ನಾವು 'ಧರ್ಮ' ವೆಂದು ಕರೆಯುತ್ತೇವೆಯೋ, ಆ ಚೌಕಟ್ಟನ್ನು ಬೌದ್ಧಮಾರ್ಗಕ್ಕೆ ಅನ್ವಯಿಸಲು ಸಾಧ್ಯವಿಲ್ಲ. ಅದನ್ನು ಕಟ್ಟುನಿಟ್ಟಿನ ಅರ್ಥದಲ್ಲಿ, ಒಂದು 'ಧರ್ಮ' ಅಥವಾ 'ತಾತ್ತ್ವಿಕ ಶಾಖೆ'ಯೆಂದು ಕರೆಯುವ ಬದಲು, 'ಜೀವನಮಾರ್ಗ' ಎಂದು ಕರೆಯುವುದು ಹೆಚ್ಚು ಪ್ರಸ್ತುತ. ಹಾಗೆಂದು ಇದು ಒಂದು ಬರಿಯ ನೈತಿಕ ಸಂಹಿತೆಯೂ ಅಲ್ಲ. ಸಂಪೂರ್ಣ ಮಾನಸಿಕ ಸ್ವಾತಂತ್ರ್ಯದೆಡೆಗೆ ಸಾಗುವ ನೈತಿಕ, ಆಧ್ಯಾತ್ಮಿಕ ಮತ್ತು ಬೌದ್ಧಿಕ ತರಬೇತಿಯ ವಿಧಾನ ವೆಂದು ಬೌದ್ಧಧರ್ಮವನ್ನು ಕರೆಯಬಹುದು. ಸ್ವತಃ ಬುದ್ಧನೇ ತನ್ನ ಬೋಧನೆಗಳನ್ನು '**ಧಮ್ಮ – ವಿನಯ**' ಎಂದು ಕರೆದಿದ್ದಾನೆ. 'ಧಮ್ಮ' ಎಂದರೆ 'ತತ್ತ್ವ.' 'ವಿನಯ' ಎಂದರೆ 'ಸಾಧನೆ.' ಬೌದ್ಧಧರ್ಮದಲ್ಲಿ 'ನಂಬಿಕೆ' ಗೆ ಇರುವುದು ಅಲ್ಪಸ್ಥಾನ. ಏಕೆಂದರೆ, ಯಾವುದೇ ರೀತಿಯ ಸೃಷ್ಟಿಕರ್ತ ಅಥವಾ ದೇವರು ಇದ್ದಾನೆ ಎಂಬ ನಿಶ್ಚಯ ಭಾವನೆಯನ್ನು ನಾವು ಇಲ್ಲಿ ನೋಡುವುದಿಲ್ಲ. ಬುದ್ಧನು ತನ್ನ ಬೋಧನೆಗಳನ್ನು ಅನುಸರಿಸುವಂತೆ ಕೇಳಿಕೊಳ್ಳುತ್ತಾನೆಯೇ ಹೊರತು, ಯಾವುದೇ ತೆರನಾದ ದೇವರನ್ನು ನಂಬುವಂತೆ ಹೇಳು ವುದಿಲ್ಲ. ಬೌದ್ಧಧರ್ಮದಲ್ಲಿ ಬುದ್ಧನು ಪ್ರಜ್ಞೆ ಮತ್ತು ಕರುಣೆಯ ಮಹಾನ್ ಗುರುವಾಗಿ ಪ್ರತಿಬಿಂಬಿತನಾಗಿದ್ದಾನೆಯೇ ಹೊರತು, ಒಬ್ಬ ದೇವರೆಂದು ಪರಿಗಣಿಸಲ್ಪಟ್ಟಿಲ್ಲ. ಬೌದ್ಧ ವಿಹಾರಗಳಲ್ಲಿ ಬುದ್ಧನ ವಿಗ್ರಹವನ್ನು ವಿಶೇಷವಾಗಿ ಪೂಜಿಸುತ್ತಾರೆ. ಆ ವಿಗ್ರಹವು ಸಾಧಕನೊಬ್ಬನ 'ಏಕಾಗ್ರತೆ' ಮತ್ತು 'ಧ್ಯಾನ' ಅಥವಾ 'ಉಪಾಸನೆ'ಯ ಧ್ಯೇಯವಸ್ತುವಾಗುವುದು; ಅದಕ್ಕೆಂದೇ ಅದು ಅವರೆಲ್ಲರ ಆರಾಧನಾಮೂರ್ತಿಯಾಗುವುದು. ಹಾಗೆಯೇ ಅದು ಆ ಸಾಧಕನು ತನ್ನ ಆಧ್ಯಾತ್ಮಿಕ ಸಾಧನೆಯಲ್ಲಿ ಉತ್ಸಾಹದಿಂದ ಮುಂದುವರೆಯುವುದಕ್ಕೆ ಸ್ಫೂರ್ತಿಯ ಆಕರವಾಗುವುದು. ಈ ವಿಗ್ರಹದ ಮೂಲಕ, ಅವನು ತಥಾಗತನ ದೈವೀಗುಣಗಳನ್ನು ತನ್ನ ವ್ಯಕ್ತಿತ್ವದಲ್ಲಿಯೂ ಮೂಡಿಸಿಕೊಳ್ಳಲು ಸಾಧ್ಯವಾಗುವುದು.

**ಬೌದ್ಧಧರ್ಮದಲ್ಲಿ ಸತ್ಯಾನ್ವೇಷಣೆ :** ಭಾರತೀಯ ತತ್ತ್ವಶಾಸ್ತ್ರದ ಮುಖ್ಯ ಉದ್ದೇಶವೆಂದರೆ ಪರಮಸತ್ಯದ ಸಾಕ್ಷಾತ್ಕಾರ ಅಥವಾ ದರ್ಶನ. ಬೌದ್ಧಧರ್ಮ ಕೂಡ ಸತ್ಯಾನ್ವೇಷಣೆಯನ್ನೇ ಪ್ರತಿಪಾದಿಸುತ್ತದೆ. ಆದರೆ ಅಂಥ ಅನ್ವೇಷಣೆಯು ಕೇವಲ ಊಹೆ, ತರ್ಕ ಅಥವಾ ತಾತ್ತ್ವಿಕ ಪ್ರತಿಪಾದನೆಗಳ ಮೇಲೆ ಆಧರಿಸಿರುವುದನ್ನು ಅದು ನಿರಾಕರಿಸುತ್ತದೆ. ಜ್ಞಾನದ ಗಳಿಕೆ ಮತ್ತು ಸಂಚಯನ ಮಾತ್ರವೇ ಬೌದ್ಧ ಧರ್ಮದ ಉದ್ದೇಶವಲ್ಲ. ಅದಕ್ಕೆ ಬದಲಾಗಿ, ಬುದ್ಧನು ಯಾವತ್ತೂ ತನ್ನ ಬೋಧನೆಯ ಅನುಷ್ಠಾನ ಭಾಗಕ್ಕೇ ಮಹತ್ವವನ್ನು ನೀಡಿದ್ದನು. ಆ ಅನುಷ್ಠಾನ ಮಾರ್ಗವು ಜ್ಞಾನ ಅಥವಾ ಪ್ರಜ್ಞೆಯನ್ನು ಬದುಕಿಗೆ ಅಳವಡಿಸಿಕೊಳ್ಳುವುದೇ ಆಗಿದೆ; ಆ ಮೂಲಕ ಬದುಕನ್ನು ಆಳವಾಗಿ ವಿಶ್ಲೇಷಿಸುವುದೇ ಆಗಿದೆ. ಬದುಕಿನತ್ತ ಕೇವಲ ಸಾಮಾನ್ಯ ದೃಷ್ಟಿ ಹರಿಸುವುದು ಮಾತ್ರವಲ್ಲ, ಬದುಕನ್ನು ಆಧ್ಯಾತ್ಮಿಕ ದೃಷ್ಟಿಯಿಂದ ಆಮೂಲಾಗ್ರವಾಗಿ ಪರೀಕ್ಷಿಸುವುದೇ ಇದರ ಉದ್ದೇಶ. ಈ ವಿಧಾನದಲ್ಲಿ ಎರಡು ಹಂತಗಳಿವೆ : ೧. ಸಂಕಟಮಯ ಅಸ್ತಿತ್ವದ ಪ್ರಜ್ಞಾಪೂರ್ಣ ಅರಿವು (ದುಃಖ) ಮತ್ತು ೨. ಆ ದುಃಖದ ನಿವಾರಣೆಗಾಗಿನ ಸೂಕ್ತ ಮಾರ್ಗದ ಅನ್ವೇಷಣೆ. ಇದೇ ಬೌದ್ಧಧರ್ಮದ ಸಾರಸತ್ವ.

**ಹೃದಯ ಮತ್ತು ಮೆದುಳು:** ಬುದ್ಧನು ಪ್ರಜ್ಞೆ ಅಥವಾ ಅರಿವಿಗೆ ಎಷ್ಟು ಮಹತ್ವವನ್ನು ನೀಡುತ್ತಾನೆಯೋ, ಅಷ್ಟೇ ಪ್ರಾಮುಖ್ಯತೆಯನ್ನು ಚಿತ್ತಶುದ್ಧಿಗೂ ನೀಡುತ್ತಾನೆ. ಅವನ ಅಭಿಪ್ರಾಯದಲ್ಲಿ, ಜ್ಞಾನವು ನೈತಿಕ ಉತ್ಕೃಷ್ಟತೆಯಿಂದ ಪರಿಪೂತವಾದ ಹೃದಯ ಪರಿಶುದ್ಧತೆಯ ಜೊತೆಜೊತೆಗೇ ಸಾಗಬೇಕಾಗುತ್ತದೆ. ಬೌದ್ಧಧರ್ಮವು ಕೇವಲ ಜ್ಞಾನಾನ್ವೇಷಣೆಯ ಅಥವಾ ಜ್ಞಾನಾಸಕ್ತಿಯ ಮಾರ್ಗವಲ್ಲ. ಅದಕ್ಕೆ ಬದಲಾಗಿ, ಸಾಧಕನನ್ನು ಪರಮವೈರಾಗ್ಯ, ಸಾಕ್ಷಾತ್ಕಾರ ಮತ್ತು ಸ್ವಾತಂತ್ರ್ಯ ಅಥವಾ ಮುಕ್ತಿಗೆ ಒಯ್ಯುವ ಪಥದಲ್ಲಿ ಮುನ್ನಡೆಯಲು ಪ್ರಚೋದಿಸುವ ಅನುಷ್ಠಾನ ಮಾರ್ಗವನ್ನು ಬೋಧಿಸುವ ಧರ್ಮ ಮಾರ್ಗ.

**ಕಾರ್ಯ–ಕಾರಣ ನಿಯಮ :** ಅಸ್ಸಾಜಿ ಎನ್ನುವ ಟಿಬೆಟನ್ ಭಿಕ್ಷುವು ಬುದ್ಧನ ಬೋಧನೆಗಳನ್ನು ಸಂಗ್ರಹರೂಪವಾಗಿ ಹೀಗೆ ನೀಡಿದ್ದಾನೆ:

> ಎಲ್ಲದಕು ಕಾರಣವು ಯಾವುದೋ
> ಬುದ್ಧನದನು ವಿವರಿಸಿರುವನು.
> ಅದರ ನಿವಾರಣೆಯನ್ನೂ ತಿಳಿಸಿಹನು;
> ಇದುವೇ ತಥಾಗತನ ಉಪದೇಶವು.

ಯಾವುದು ಆ ಕಾರಣ? ಆ ಕಾರಣದ ನಿವಾರಣೆಯಾದರೂ ಹೇಗೆ ಅಥವಾ ಯಾವುದರಿಂದ ? ಇದೇ ಬೌದ್ಧ ಧರ್ಮದ ತಿರುಳು. ಅದರ ಪ್ರಕಾರ 'ಕಾರಣ' ಎಂದರೆ ದುಃಖ ಅಥವಾ ಸಂಕಷ್ಟವನ್ನು ಉಂಟುಮಾಡುವ 'ಕಾರಣ'ಗಳು ಅಥವಾ 'ಪರಿಸ್ಥಿತಿ'ಗಳು. ಅವು ನಮ್ಮ ಜೀವನವನ್ನು ಅಸಹ್ಯವನ್ನಾಗಿ ಮಾಡುತ್ತವೆ. ಈ ಕಾರಣಗಳ ಅಥವಾ ಪರಿಸ್ಥಿತಿಗಳ ನಿರ್ಮೂಲನವೇ ದುಃಖದ ನಿರ್ಮೂಲನಕ್ಕೂ ಕಾರಣವಾಗುತ್ತದೆ. ದುಃಖದ ಸಂಪೂರ್ಣ ವಿನಾಶವೇ ಎಲ್ಲ ಆಧ್ಯಾತ್ಮಿಕ ಸಾಧನೆಗಳ ಗುರಿ. ಬುದ್ಧನು ತತ್ತ್ವಶಾಸ್ತ್ರದ ಸಮಸ್ಯೆಗಳಿಗೆ ಅಷ್ಟೇನೂ ಗಮನ ನೀಡಲಿಲ್ಲ. ಜೀವನದ ಸಾರ್ವತ್ರಿಕ ವಾಸ್ತವವಾದ ದುಃಖದ ಸಮಸ್ಯೆಯನ್ನು, ಅದರ ಎಲ್ಲ ವಿವರಗಳೊಂದಿಗೆ ತಿಳಿಹೇಳುವುದೇ ಬುದ್ಧನ ಜೀವಿತದ ಏಕಮಾತ್ರ ಗುರಿಯಾಗಿದ್ದಿತು. ಸಂಕ್ಷಿಪ್ತವಾಗಿ ಹೇಳಬೇಕಾದರೆ, ದುಃಖವು ಕಾರಣಗಳು ಮತ್ತು ಪರಿಸ್ಥಿತಿಗಳಿಂದ ಉಂಟಾಗುತ್ತದೆಯೆಂದು ಬೌದ್ಧಧರ್ಮದ ಕಾರ್ಯ–ಕಾರಣ ಸಿದ್ಧಾಂತ (Doctrine of Conditionality) ಅಥವಾ ಅವಲಂಬನ ಸೃಷ್ಟಿವಾದ (Dependent Arising) – ಇವು ಗಳು ಪ್ರತಿಪಾದಿಸುತ್ತವೆ. ಜಗತ್ತಿನಲ್ಲಿ ಎಲ್ಲವೂ ಇನ್ನೊಂದರ ಮೇಲೆ ಅವಲಂಬಿತವಾಗಿದೆ. ಎಲ್ಲ ರೀತಿಯ ಹುಟ್ಟುವಿಕೆ ಅಥವಾ ಸೃಷ್ಟಿಯು ಅದೇ ತರಹ ಕಂಡುಬರುತ್ತದೆ. ಇದನ್ನು ಪ್ರತಿಪಾದಿಸುವ ವಾದವನ್ನೇ ಅವಲಂಬನ ಸೃಷ್ಟಿವಾದ ಎನ್ನುವುದು. ಈ ಬಗೆಯ ಕಾರಣಗಳು, ಪರಿಸ್ಥಿತಿಗಳು ಮತ್ತು ಅವಲಂಬನಗಳನ್ನು ನಮ್ಮ ಜೀವನದಿಂದ ನಿವಾರಿಸಿಕೊಳ್ಳುವುದೇ ದುಃಖದ ಶಮನಕ್ಕೆ ರಾಜಮಾರ್ಗವಾಗುತ್ತದೆ. ಅಂಥ ನಾಲ್ಕು ಸಾರ್ವತ್ರಿಕ ವಾಸ್ತವಾಂಶಗಳನ್ನು ಬುದ್ಧನು ಬೋಧಿಸುತ್ತಾನೆ. ಇವನ್ನೇ 'ನಾಲ್ಕು ಆರ್ಯಸತ್ಯಗಳು' ಎಂದು ಕರೆಯುತ್ತಾರೆ. ಬೌದ್ಧಧರ್ಮದ ಕೇಂದ್ರ ತತ್ತ್ವವೇ ಇದು.

**ನಾಲ್ಕು ಆರ್ಯಸತ್ಯಗಳು :** ಬುದ್ಧನು ಗಯಾಕ್ಷೇತ್ರದಲ್ಲಿರುವ ಬೋಧಿ ವೃಕ್ಷದ ಅಡಿಯಲ್ಲಿ ಗಾಢಧ್ಯಾನದಲ್ಲಿ ತೊಡಗಿದ್ದಾಗ ಕಂಡುಕೊಂಡ ಸತ್ಯಗಳಿವು. ಇವನ್ನು ಸಾರನಾಥದ ಬಳಿಯ ಮೃಗವನದಲ್ಲಿ ಐದು

ಜನ ತಾಪಸಿಗಳಿಗೆ ಮೊಟ್ಟಮೊದಲಬಾರಿಗೆ ಉಪದೇಶ ಮಾಡಿದನು. ಇವುಗಳನ್ನು ಬೌದ್ಧಧರ್ಮದ ಕೇಂದ್ರ ತತ್ತ್ವಗಳು ಎಂದು ಕರೆಯ ಬಹುದು. ಅವು ಹೀಗಿವೆ: **೧. ದುಃಖ; ೨. ಸಮುದಯ:** ದುಃಖದ ಹುಟ್ಟುವಿಕೆ; **೩.ನಿರೋಧ:** ದುಃಖದ ಶಮನ ೪. **ಮಾರ್ಗ:** ದುಃಖದ ಶಮನಕ್ಕೆ ಕೊಂಡೊಯ್ಯುವ ದಾರಿ.

**೧. ದುಃಖ :** ಬೌದ್ಧ ಚಿಂತನೆಯಲ್ಲಿ ದುಃಖದ ಪರಿಕಲ್ಪನೆಯು ಅತ್ಯಂತ ಮಹತ್ವವಾದದ್ದು. ಈ ಪದವನ್ನು ಲೌಕಿಕ ಪರಿಭಾಷೆಯಲ್ಲಿ ಅನುವಾದ ಮಾಡುವುದು ಸುಲಭವಲ್ಲ. ಸಂಕಷ್ಟ, ವ್ಯಾಧಿ, ಕ್ರೋಧ, ತಾಪತ್ರಯ – ಈ ಪದಗಳನ್ನು ಸಾಮಾನ್ಯವಾಗಿ ಉಪಯೋಗಿಸ ಬಹುದು. ಆದರೆ ಪ್ರಾಚೀನ ಬೌದ್ಧ ಧರ್ಮದ ಸಾಹಿತ್ಯದಲ್ಲಿ ಈ ಪದವನ್ನು ಇವೆಲ್ಲಕ್ಕಿಂತಲೂ ಹೆಚ್ಚು ವ್ಯಾಪಕವಾದ ಅರ್ಥದಲ್ಲಿ ಬಳಸಲಾಗಿದೆ. ಈ ಪದವು ಸಂದರ್ಭಕ್ಕೆ ಅನುಸಾರವಾಗಿ, ಮನೋವೈಜ್ಞಾನಿಕ, ಭೌತಿಕ ಅಥವಾ ಲೌಕಿಕ ಮತ್ತು ತಾತ್ತ್ವಿಕ ಅರ್ಥಗಳನ್ನು ಪಡೆದುಕೊಳ್ಳುತ್ತದೆ. ಬುದ್ಧನ ಪ್ರಕಾರ ಈ ಜಗತ್ತಿನ ಏಕಮೇವ ಸಮಸ್ಯೆಯೆಂದರೆ ಈ ದುಃಖವೇ. ಸಂಕಷ್ಟ, ಅಸಮಾಧಾನಗಳು ತುಂಬಿರುವ ಪ್ರತಿಯೊಬ್ಬ ಮಾನವ ಸಮಸ್ಯೆಯನ್ನೂ 'ದುಃಖ'ವೆಂದೇ ಇಲ್ಲಿ ಕರೆಯಲಾಗಿದೆ. ಸಹಜ ವಾಗಿಯೇ, ಮಾನವನ ಪ್ರತಿಯೊಂದು ಕಾರ್ಯವೂ ಈ ಅಸಮಾಧಾನವನ್ನು ನಿವಾರಿಸಿಕೊಳ್ಳಲು ನಡೆಸುವ ಪ್ರಯತ್ನವೇ ಆಗಿದೆ; ಜಗತ್ತಿನಲ್ಲಿ ಕಂಡುಬರುವ ವೈಪರೀತ್ಯಗಳನ್ನು ನಿಯಂತ್ರಿಸಲು ಮತ್ತು ಮನಸ್ಸಿನಲ್ಲಿ ಮೂಡುವ ನೋವುಗಳನ್ನು ಶಮನ ಮಾಡಿ ಕೊಳ್ಳುವ ಯತ್ನವೇ ಆಗಿದೆ. ಈ ಏಕಮೇವ ಸಮಸ್ಯೆಗೇ ನಾವು ವಾಣಿಜ್ಯ ಸಮಸ್ಯೆ, ಸಾಮಾಜಿಕ ಸಮಸ್ಯೆ, ರಾಜಕೀಯ ಸಮಸ್ಯೆ, ಮನೋವೈಜ್ಞಾನಿಕ ಸಮಸ್ಯೆ, ಧಾರ್ಮಿಕ ಸಮಸ್ಯೆ ಮುಂತಾದ ವಿವಿಧ ಹೆಸರುಗಳನ್ನು ಕೊಡುತ್ತೇವೆ. ಇವೆಲ್ಲ ಸಮಸ್ಯೆಗಳೂ ಒಂದೇ ಒಂದು ಮೂಲಭೂತ ಸಮಸ್ಯೆಯ ವಿವಿಧ ಅಭಿವ್ಯಕ್ತಿಗಳು ಮಾತ್ರ. ಅದೇ ದುಃಖ ಅಥವಾ ಅಸಮಾಧಾನ. ಲೌಕಿಕ ಆಯಾಮದಲ್ಲಿ ನಾವೆಷ್ಟೇ ಪ್ರಯತ್ನಪಟ್ಟರೂ ಇದು ನಮ್ಮನ್ನು ಎಂದಿಗೂ ಬಿಡುವುದೇ ಇಲ್ಲ.

ಆದ್ದರಿಂದಲೇ ಬೌದ್ಧಧರ್ಮವು ಜೀವನವೇ ದುಃಖಮಯ ಎನ್ನುತ್ತದೆ; ಇಡೀ ಬಾಳನ್ನೇ ದುಃಖವು ಆವರಿಸಿರುತ್ತದೆ ಎಂದು ಬೋಧಿಸುತ್ತದೆ. ಇಡೀ ಪ್ರಪಂಚವನ್ನು ತಲ್ಲಣಗೊಳಿಸುತ್ತಿರುವ ಮೂಲಭೂತ ಸಮಸ್ಯೆಯೇ ಇದು. ಇಡೀ ಜಗತ್ತೇ ಸಂಕಷ್ಟಪಡುತ್ತಿದೆ. ಏಕೆಂದರೆ ಯಾವ ಜೀವಿಯೂ ಇದರಿಂದ ಹೊರತಾಗಿಲ್ಲ. ಈ ಸಾರ್ವತ್ರಿಕ ಸತ್ಯವನ್ನು ಯಾವ ಪ್ರಜ್ಞಾಪೂರ್ಣ ವ್ಯಕ್ತಿಯೂ ನಿರಾಕರಿಸಲು ಸಾಧ್ಯವಿಲ್ಲ.

ಸಾಧಾರಣ ವ್ಯಕ್ತಿಯೊಬ್ಬ ಪ್ರಪಂಚದ ಭೋಗಗಳಲ್ಲಿಯೇ ಸುಖ ವಿದೆ ಎಂದು ಭಾವಿಸುತ್ತಾನೆ. ಆದರೆ ಅವೆಲ್ಲವೂ ನಿರಾಸೆ ಅಥವಾ ಹತಾಶೆಯನ್ನೇ ಉಂಟುಮಾಡುತ್ತವೆ. ಯಾವ ವ್ಯಕ್ತಿಯು ಚರ ಮತ್ತು ಅಚರ ವಸ್ತುಗಳಲ್ಲಿನ ತನ್ನ ಅತೀವ ಆಸಕ್ತಿಯನ್ನು ತ್ಯಜಿಸಿ, ಜೀವನವನ್ನು ನಿರಾಸಕ್ತ ಅಥವಾ ಸಾಕ್ಷೀಬುದ್ಧಿಯಿಂದ ಅನುಭವಿಸು ತ್ತಾನೆಯೋ, ಅವನು ಮಾತ್ರವೇ ಎಲ್ಲವನ್ನೂ ಯಥಾರ್ಥ ದೃಷ್ಟಿ ಯಿಂದ ಕಾಣಬಲ್ಲ. ಅನುಭವದ ಸಂಗತಿಗಳ ಸರಿಯಾದ ಪ್ರಜ್ಞೆಯೇ ಈ ಯಥಾರ್ಥ ದೃಷ್ಟಿ ಅನ್ನಿಸಿಕೊಳ್ಳುತ್ತದೆ. ಅಂಥ ಮೂರು ಸಂಗತಿಗಳನ್ನು ಬೌದ್ಧ ಧರ್ಮದಲ್ಲಿ ಹೆಸರಿಸುತ್ತಾರೆ: **ಭೋಗ,** ಅದರ **ದುಷ್ಟ ಪರಿಣಾಮ** ಮತ್ತು **ಅದರ ನಿವಾರಣೆ.**

ದುಃಖದ ಸ್ವರೂಪ ಮೂರು ಬಗೆ : **೧. ಸಾಧಾರಣ ಸ್ವರೂಪದ ದುಃಖ ೨. ಕಾರ್ಯ–ಕಾರಣ ಸ್ಥಿತಿಯಲ್ಲಿ ತೋರಿಬರುವ ಅಸಮಾಧಾನ ಅಥವಾ ಸಂಕಷ್ಟ ೩. ಪರಿವರ್ತನೆಯಿಂದ ಉಂಟಾಗುವ ಕಷ್ಟ.**

**೧. ಸಾಧಾರಣ ಸ್ವರೂಪದ ದುಃಖ :** ನಾವು ನಮ್ಮ ದೈನಂದಿನ ಜೀವನದಲ್ಲಿ ಯಾವುದನ್ನು 'ದುಃಖ'ವೆಂದು ಭಾವಿಸುತ್ತೇವೆಯೋ ಅದು ಸಾಧಾರಣ ಸ್ವರೂಪದ ದುಃಖ. ಸಾಮಾನ್ಯವಾಗಿ ಯಾವುದನ್ನು ನಾವು ಮತ್ತೆ ಮತ್ತೆ ದೂರವಿಡಲು ಇಚ್ಛಿಸುತ್ತೇವೆಯೋ, ಆ ಸಂವೇದನೆಯೇ ದುಃಖ. ಯಾವುದನ್ನು ನಾವು ಮತ್ತೆ ಮತ್ತೆ ಪಡೆದು ಕೊಳ್ಳಲು ಇಚ್ಛಿಸುತ್ತೇವೆಯೋ ಅದೇ ಸುಖ. ಇದು ನಮ್ಮ ಲೌಕಿಕ ಬುದ್ಧಿಗೆ ಹೊಳೆಯುವ ಪರಿಕಲ್ಪನೆ.

**೨. ಕಾರ್ಯ–ಕಾರಣ ಸ್ಥಿತಿಯಲ್ಲಿ ತೋರಿಬರುವ ಅಸಮಾಧಾನ ಅಥವಾ ಸಂಕಷ್ಟ :** ಪಾಲಿ ಭಾಷೆಯ *ಸಂಖರ* ಎಂಬ ಪದವು ಕಾರ್ಯ–ಕಾರಣ ನಿಯಮಕ್ಕೆ ಬದ್ಧವಾದ ಸಂಗತಿಗಳನ್ನು ಸಂಕೇತಿಸುತ್ತದೆ. ಹಾಗೆಯೇ ಕಾರ್ಯ–ಕಾರಣ ನಿಯಮವು ಎಲ್ಲಿ ಅನ್ವಯಿಸುವುದೋ ಆ ಅನುಭವ ಸ್ಥಿತಿಗಳನ್ನೂ ಈ ಪದವೇ ಸೂಚಿಸುತ್ತದೆ. ಇಂಥ ಸ್ಥಿತಿಗಳನ್ನು ಐದು ಗುಂಪುಗಳು ಅಥವಾ ಒಕ್ಕೂಟಗಳನ್ನಾಗಿ ಅವುಗಳ ಸಂದರ್ಭಾನುಸಾರ ವಿಂಗಡಿಸಲಾಗಿದೆ: ೧. ಜಡವಸ್ತುಗಳ ಒಕ್ಕೂಟ ೨. ಸಂವೇದನೆಗಳ ಒಕ್ಕೂಟ ೩. ಇಂದ್ರಿಯಾನುಭವಗಳ ಒಕ್ಕೂಟ ೪. ಮಾನಸಿಕ ವೃತ್ತಿಗಳ ಒಕ್ಕೂಟ ಮತ್ತು ೫. ಅರಿವು ಅಥವಾ ಚೈತನ್ಯ ಸಂಗತಿಗಳ ಒಕ್ಕೂಟ. ಒಟ್ಟಾರೆ ಇವೆಲ್ಲವನ್ನೂ **ನಾಮ–ರೂಪ** ಎಂದು ಕರೆಯುತ್ತಾರೆ. **'ರೂಪ'**ವು ಎಲ್ಲ ರೀತಿಯ ಭೌತಿಕ ಅಥವಾ ಜಡ ಪದಾರ್ಥಗಳನ್ನು ಒಳಗೊಂಡಿದ್ದರೆ, **'ನಾಮ'**ವು ಉಳಿದೆಲ್ಲ ಒಕ್ಕೂಟಗಳನ್ನೂ ಒಳಗೊಂಡಿದೆ. ಮೊದಲ ಆರ್ಯಸತ್ಯದ ಮುಖ್ಯಾಂಶವನ್ನು ಬುದ್ಧ ಹೀಗೆ ತಿಳಿಹೇಳುತ್ತಾನೆ: "ಸಂಗ್ರಹವಾಗಿ ಹೇಳುವುದಾದರೆ, ಅನುಭವಗಳ ಈ ಐದು ಒಕ್ಕೂಟಗಳೇ ದುಃಖವೆಂದೆನಿಸಿಕೊಳ್ಳುತ್ತವೆ." ಈ ಜಗತ್ತಿನಲ್ಲಿ ಇರುವ ಎಲ್ಲ ವಸ್ತುಗಳು ಮತ್ತು ಘಟನೆಗಳು ಕಾರ್ಯ–ಕಾರಣ ನಿಯಮದ ಅಧೀನಕ್ಕೇ ಒಳಪಟ್ಟಿವೆ. ಹೀಗಾಗಿ ಇಡೀ ಜಗತ್ತು ಮತ್ತು ಮತ್ತು ಮಾನವ ಜೀವನ ದುಃಖಮಯವೇ ಎನ್ನುವುದು ಬೌದ್ಧ ಧರ್ಮದ ಬೋಧನೆ.

**೩. ಪರಿವರ್ತನೆ ಅಥವಾ ಮಾರ್ಪಾಡುಗಳಿಂದ ಆಗುವ ದುಃಖ:** ಪ್ರತಿಯೊಂದು ಜೀವಿ ಮತ್ತು ಇಡೀ ಜಗತ್ತೇ ಪರಿವರ್ತನ ಶೀಲವಾದುದು. ಕ್ಷಣಿಕವಾದ ಎಲ್ಲ ಸಂಗತಿಗಳೂ ದುಃಖವನ್ನು ತಂದುಕೊಡುವಂಥವು. ಇದು ಎಲ್ಲರ ಅನುಭವಕ್ಕೆ ಬರುವ ವಾಸ್ತವಾಂಶ. ಹೀಗಾಗಿ ನಿತ್ಯವಾದ ಸುಖವನ್ನು ಈ ಪ್ರಪಂಚದಲ್ಲಿ ಅನುಭವಿಸಲು ಸಾಧ್ಯವೇ ಇಲ್ಲ ಎನ್ನುವುದು ಬೌದ್ಧಧರ್ಮದ ಅಭಿಪ್ರಾಯ. ಇದರ ಪ್ರಕಾರ, ಸರ್ವವ್ಯಾಪಿಯಾದ ಈ ದುಃಖದ ಸಾರ್ವತ್ರಿಕ ಹಾಗೂ ಸಾರ್ವಕಾಲಿಕ ಪ್ರಭಾವವನ್ನು ನಾವು ಗಮನಕ್ಕೆ ತಂದುಕೊಳ್ಳಬೇಕು. ಇದೇ ಮೊದಲನೆಯ ಆರ್ಯಸತ್ಯದ ಸಂದೇಶ.

(**ಮುಂದಿನ ತಿಂಗಳ ಸಂಚಿಕೆಯಲ್ಲಿ :** *ಉಳಿದ ಆರ್ಯಸತ್ಯಗಳು ಮತ್ತು ಅಷ್ಟಾಂಗ ಮಾರ್ಗಗಳು*)

೨೦

ಸ್ವಾಮಿ ನಿತ್ಯಸ್ಥಾನಂದ

# ಅಭ್ಯಾಸ ಮತ್ತು ವೈರಾಗ್ಯ




"ಮನಸ್ಸಿನಂತೆ ಮನುಷ್ಯ." "ಮಾನವ ನೆಂದರೆ ದೇಹವನ್ನು ಹೊಂದಿರುವ ಮನಸ್ಸು, ಮನಸ್ಸನ್ನು ಹೊಂದಿರುವ ದೇಹವಲ್ಲ." "ಮನಸ್ಸೇ ಮನುಷ್ಯನ ಬಂಧಮೋಕ್ಷಗಳಿಗೆ ಕಾರಣ." "ಮನಸ್ಸಿದ್ದಂತೆ ಮಾರ್ಗ." "ಮನುಷ್ಯನು ತಾನು ಆಲೋಚಿಸಿದಂತೆ ಆಗುತ್ತಾನೆ." "ಮನಸ್ಸಿನಿಂದಲೇ ಪ್ರಪಂಚ ನಡೆಯುತ್ತಿದೆ, ಮನಸ್ಸಿನಿಂದಲೇ ಪ್ರಪಂಚ ಚಲಿಸುತ್ತಿದೆ, ಮತ್ತು ಪ್ರಪಂಚದಲ್ಲಿರುವ ಒಳಿತು ಕೆಡುಕುಗಳಿಗೆಲ್ಲ ಮನಸ್ಸೇ ಕಾರಣ" (ಬುದ್ಧ). ಇಂತಹ ಅನೇಕ ಹೇಳಿಕೆಗಳು ಮನಸ್ಸಿನ ಪ್ರಾಮುಖ್ಯವನ್ನು ಎತ್ತಿ ತೋರಿಸುತ್ತವೆ. ನಮಗೆ ನಾವೇ ಮಿತ್ರರು ಅಥವಾ ಶತ್ರುಗಳು ಆಗುವುದು ನಮ್ಮ ಮನಸ್ಸಿನ ಮೂಲಕವೇ ಎಂಬುದನ್ನು ನೋಡಿದೆವು. ನಿಗ್ರಹಿಸಲ್ಪಟ್ಟ ಮನಸ್ಸು ನಮಗೆ ಬಂಧುವಾಗುತ್ತದೆ, ಹಾಗಿಲ್ಲದ ಮನಸ್ಸು ನಮಗೆ ಶತ್ರುವಾಗುತ್ತದೆ. ಆದರೆ ಮನಸ್ಸನ್ನು ನಿಗ್ರಹಿಸುವುದು ಅಷ್ಟು ಸುಲಭವೇ? ಇಡೀ ಪ್ರಪಂಚವನ್ನೇ ಬೇಕಾದರೂ ಗೆಲ್ಲಬಹುದು, ಆದರೆ, ಮನಸ್ಸನ್ನು ಗೆಲ್ಲುವುದು ಕಷ್ಟ. ಸಮುದ್ರವನ್ನು ಬೇಕಾದರೆ ದಾಟಬಹುದು, ಆದರೆ, ಈ ಚಿತ್ತನದಿಯನ್ನು ದಾಟುವುದು ಅಷ್ಟು ಸುಲಭವಲ್ಲ. ಸಾಗರದಾಳದಲ್ಲಿರುವುದನ್ನು ಕಂಡುಹಿಡಿಯಬಹುದು. ಆದರೆ ಮನಸ್ಸಿನಾಳದಲ್ಲಿರುವುದನ್ನು ಪತ್ತೆಹಚ್ಚಬಹುದೇ? ಭೂಮಿಯ ಗುರುತ್ವಾಕರ್ಷಣೆಯನ್ನೂ ಮೀರಿ ಹೋಗಬಹುದು, ಆದರೆ ಮನಸ್ಸು ಒಡ್ಡುವ ಆಕರ್ಷಣೆಗಳಿಂದ ದೂರವಾಗುವುದು ಅತ್ಯಂತ ದುಸ್ತರ. ಮನೋನಿಗ್ರಹವು ಎಷ್ಟು ಕಷ್ಟವೆಂಬುದನ್ನು ಅರ್ಜುನನು ಭಗವದ್ಗೀತೆಯಲ್ಲಿ ಹೀಗೆ ವಿವರಿಸುತ್ತಾನೆ:

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥**

(೬ : ೩೪)

"ಎಲೈ ಕೃಷ್ಣ, ಮನಸ್ಸು ಚಂಚಲವಾದದ್ದು, ಅದು ಕ್ಷೋಭೆಯನ್ನು ಉಂಟುಮಾಡುತ್ತದೆ, ಬಲಯುತವಾದುದು ಮತ್ತು ದೃಢವಾದುದು. ಅದರ ನಿಗ್ರಹವು ವಾಯುವಿನ ನಿಗ್ರಹದಂತೆ ಅತ್ಯಂತ ಕಷ್ಟವೆಂದು ನಾನು ತಿಳಿಯುತ್ತೇನೆ."

'ಪ್ರಮಾಥಿ' ಎಂಬುದಕ್ಕೆ **'ಪ್ರಮಥನಶೀಲಂ ದೇಹೇಂದ್ರಿಯ ಕ್ಷೋಭಕಂ'** ಎಂದು ಶ್ರೀಧರ ಸ್ವಾಮಿಗಳು ವಿವರಣೆ ನೀಡುತ್ತಾರೆ. ಮನಸ್ಸಿನಿಂದ ದೇಹೇಂದ್ರಿಯಗಳ ಮೇಲೆ ಉಂಟಾಗುವ ಪರಿಣಾಮವು ಎಲ್ಲರಿಗೂ ತಿಳಿದ ವಿಷಯ. ಮನಸ್ಸಿನಲ್ಲುಂಟಾಗುವ ಭಾವೋದ್ವೇಗಗಳ ಅಲೆಗಳು ಇಡೀ ವ್ಯಕ್ತಿತ್ವದಲ್ಲಿ ಮಹಾ ಕ್ಷೋಭೆಯನ್ನು ಉಂಟುಮಾಡುತ್ತವೆ. ಆದ್ದರಿಂದಲೇ ಮನಸ್ಸು ಅತ್ಯಂತ ಬಲಯುತವಾದುದು ಎಂದು ಹೇಳಿರುವುದು. ಶ್ರೀಧರಸ್ವಾಮಿಗಳು 'ಬಲವತ್' ಎಂಬುದನ್ನು **'ವಿಚಾರೇಣಾಪಿ ಜೇತುಮ್ ಅಶಕ್ಯಂ'** ಎಂದು ವಿವರಿಸುತ್ತಾರೆ. ಮನಸ್ಸಿನ ಚಂಚಲತೆಯ ಮುಂದೆ ವಿಚಾರ ದುರ್ಬಲವಾಗುತ್ತದೆ. ಇಂದ್ರಿಯ ವಿಷಯಗಳ ಕಡೆ ಬಲವಾದ ಆಕರ್ಷಣೆ ಇರುವಾಗ ವಿಚಾರದ ಮೂಲಕ ಮನಸ್ಸನ್ನು ಎಷ್ಟೇ ಸೆಳೆಯಲು ಪ್ರಯತ್ನಿಸಿದರೂ ಅದು ಕೇಳುವುದಿಲ್ಲ. ಮನಸ್ಸು ಮಕ್ಕಳಂತೆ ಹಠಮಾರಿ. ಮನಸ್ಸು ಅತ್ಯಂತ ದೃಢವಾದುದು ಕೂಡ. **ವಿಷಯವಾಸನಾನುಬದ್ಧತಯಾ ದುರ್ಭೇದಂ** – 'ಮನಸ್ಸು ಬಿಡಿಸಲಾಗದಷ್ಟು ವಿಷಯವಾಸನೆಗಳಿಗೆ ಬದ್ಧವಾಗಿದೆ' ಎಂದು ಶ್ರೀಧರ ಸ್ವಾಮಿಗಳು 'ದೃಢ' ಶಬ್ದಕ್ಕೆ ವಿವರಣೆ ನೀಡುತ್ತಾರೆ. ಒಂದು ಮರವು ಭೂಮಿಯಲ್ಲಿ ದೃಢವಾಗಿ ಬೇರುಬಿಟ್ಟಿರುವಂತೆ ಮನಸ್ಸು ವಿಷಯವಾಸನೆಗಳಲ್ಲಿ ದೃಢವಾಗಿ ಬೇರೂರಿಬಿಟ್ಟಿದೆ. ಈಗ ಅದನ್ನು ಎಳೆದು ತೆಗೆದು ಅಧ್ಯಾತ್ಮದಲ್ಲಿ ನೆಲೆನಿಲ್ಲುವಂತೆ ಮಾಡುವುದು ಎಷ್ಟು ಕಷ್ಟ!

ಈ ಮನಸ್ಸನ್ನು ನಿಗ್ರಹಿಸುವುದು ಗಾಳಿಯನ್ನು ನಿಗ್ರಹಿಸುವಷ್ಟೇ ಕಷ್ಟ. ಇಲ್ಲಿ ಮನಸ್ಸನ್ನು ಗಾಳಿಗೆ ಹೋಲಿಸಿರುವುದು ತುಂಬ ಅರ್ಥಪೂರ್ಣವಾಗಿದೆ. ಗಾಳಿ ಯಾವಾಗಲೂ ಚಲಿಸುತ್ತಿರುವಂತೆ ಮನಸ್ಸು ಚಲಿಸುತ್ತಿರುತ್ತದೆ. ಗಾಳಿ ವಿವಿಧ ಗಂಧಗಳನ್ನು ಹೊಂದಿರುವಂತೆ ಮನಸ್ಸೂ ವಿವಿಧ ಸಂಸ್ಕಾರಗಳಿಂದ ಕೂಡಿರುತ್ತದೆ. ಗಾಳಿಯು ಕೆಲವೊಮ್ಮೆ ಬಿರುಗಾಳಿಯಾಗಿ ಮನೆ ಮಠ ಮರಗಳನ್ನೆಲ್ಲ ಉರುಳಿಸುತ್ತದೆ. ಹಾಗೆಯೇ ಮನಸ್ಸಿನಲ್ಲಿಯೂ ಭಾವೋದ್ವೇಗದ ಬಿರುಗಾಳಿ ಎದ್ದರೆ ಅದು ಜ್ಞಾನಾಗ್ನಿಯನ್ನು ಆರಿಸಿಬಿಡುತ್ತದೆ, ವಿಚಾರಸೌಧವನ್ನು ಉರುಳಿಸಿಬಿಡುತ್ತದೆ, ಮತ್ತು ನೈತಿಕವೃಕ್ಷವನ್ನು ಬುಡಮೇಲು ಮಾಡಿಬಿಡುತ್ತದೆ. ಕೆಲವೊಮ್ಮೆ ಸುಂಟರಗಾಳಿ ಎದ್ದು ಸುತ್ತಲಿನ ಎಲ್ಲವನ್ನು ಸೆಳೆದುಕೊಂಡು ಸುತ್ತುತ್ತ ಹೋಗುತ್ತದೆ. ಹಾಗೆಯೇ ಮನಸ್ಸಿನಲ್ಲಿಯೂ ಚಿಂತೆ, ಕಾತರತೆ ಮುಂತಾದ ಸುಳಿಗಳುಂಟಾಗಿ ಎಲ್ಲ ಮಾನಸಿಕ ಶಕ್ತಿಯನ್ನೂ ಸೆಳೆದುಕೊಂಡು ಮನುಷ್ಯನನ್ನು ದುರ್ಬಲಗೊಳಿಸುತ್ತವೆ; ಯಾವುದರಲ್ಲಿಯೂ ಮನಸ್ಸನ್ನು ತೊಡಗಿಸಲಾಗದ ಸ್ಥಿತಿ ಉಂಟಾಗುತ್ತದೆ. ಗಾಳಿ ಕೆಲವೊಮ್ಮೆ ಸ್ತಬ್ಧವಾಗಿರುತ್ತದೆ, ಅದು ಚಲಿಸುವುದೇ ತಿಳಿಯುವುದಿಲ್ಲ. ಹಾಗೆಯೇ ಮನಸ್ಸೂ ಕೂಡ ಕೆಲವೊಮ್ಮೆ ಸ್ತಬ್ಧವಾಗುತ್ತದೆ, ಯಾವುದರಲ್ಲಿಯೂ ಉತ್ಸಾಹವಿರುವುದಿಲ್ಲ. ಗಾಳಿಯು ಅನೇಕ ಅನಿಲಗಳ ಮಿಶ್ರಣವಾಗಿರುವಂತೆ ಮನಸ್ಸೂ ಕೂಡ ಜ್ಞಾನಭಾವಾದಿಗಳ ಒಂದು ಮಿಶ್ರಣ. ಇಂತಹ ಚಂಚಲವಾದ ಮನಸ್ಸನ್ನೂ 'ಅಭ್ಯಾಸ' ಮತ್ತು 'ವೈರಾಗ್ಯ'ಗಳ ಮೂಲಕ ನಿಗ್ರಹಿಸಬಹುದೆಂದು ಶ್ರೀಕೃಷ್ಣನು ಭರವಸೆ ನೀಡುತ್ತಾನೆ. ನಾವು ಯಾವುದೇ ಹೊಸ

ವಿಷಯವನ್ನು ಕಲಿಯಬೇಕಾದರೂ ಅಭ್ಯಾಸ ಆವಶ್ಯಕ ಮತ್ತು ಅದರ ಜೊತೆಗೆ ಅನ್ಯ ವಿಷಯಗಳ ಕಡೆ ಅನಾಸಕ್ತಿಯೂ ಇರಬೇಕಾಗುತ್ತದೆ. ಅನಾಸಕ್ತಿ ಅಥವಾ ವೈರಾಗ್ಯ ಅಧಿಕವಾದಷ್ಟು ಅಭ್ಯಾಸವು ತೀವ್ರವಾಗುತ್ತದೆ; ಇದು ತೀವ್ರವಾದಂತೆ, ಕಲಿಯುವುದು ಶೀಘ್ರವೂ ಪರಿಪೂರ್ಣವೂ ಆಗುತ್ತದೆ. ಹಾಗೆಯೇ ಯಾವುದಾದರೂ ಕಾರ್ಯಸಿದ್ಧಿ ಆಗಬೇಕಾದರೂ ನಮ್ಮನ್ನು ಅದರಲ್ಲಿ ಹೆಚ್ಚು ಹೆಚ್ಚು ತೊಡಗಿಸಿಕೊಳ್ಳುವುದು ಅತ್ಯಂತ ಆವಶ್ಯಕ. ಇಲ್ಲಿ ಇದು ಅಭ್ಯಾಸ. ಇಲ್ಲಿಯೂ ಅನ್ಯ ವಿಷಯಗಳ ಕಡೆ ಅನಾಸಕ್ತಿ ಇರಬೇಕಾಗುತ್ತದೆ. ಹೀಗೆ ಅಭ್ಯಾಸ ಮತ್ತು ವೈರಾಗ್ಯ ಎಲ್ಲ ಕ್ಷೇತ್ರಗಳಿಗೂ ಅನ್ವಯವಾಗುತ್ತವೆ. ಬೀಜವನ್ನು ಬಿತ್ತಿ ಗೊಬ್ಬರ ನೀರನ್ನು ಒದಗಿಸುವುದು ಅಭ್ಯಾಸ, ಕಳೆಯನ್ನು ತೆಗೆಯುವುದು ವೈರಾಗ್ಯ. ಹೊಲಕ್ಕೆ ನೀರನ್ನು ಹಾಯಿಸುವುದು ಅಭ್ಯಾಸ, ಇಲಿಬಿಲಗಳನ್ನು ಮುಚ್ಚುವುದು ವೈರಾಗ್ಯ. ಕುಟುಂಬ, ಸಂಸ್ಥೆ, ಸಮಾಜಗಳಲ್ಲಿ ಇತರರೊಂದಿಗೆ ಹೊಂದಿಕೊಂಡು ಬಾಳಲು ಎಷ್ಟೋ ಸದ್ಗುಣಗಳನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಇದು ಅಭ್ಯಾಸ. ನಾವು ಎಷ್ಟೋ ತ್ಯಾಗವನ್ನು ಮಾಡಬೇಕಾಗುತ್ತದೆ, ಸ್ವಕೇಂದ್ರ ಮನೋಭಾವವನ್ನು ತೊರೆದು ಪರಕೇಂದ್ರ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಇದು ವೈರಾಗ್ಯ.

ಮನಸ್ಸನ್ನು ನಿಗ್ರಹಿಸುವುದೆಂದರೆ ಮನಸ್ಸಿನ ಚಂಚಲತೆಯನ್ನು ಹೋಗಲಾಡಿಸುವುದು. ಇದಕ್ಕೆ ಏಕತತ್ತ್ವಾಭ್ಯಾಸವು ಆವಶ್ಯಕವೆಂದು ಪತಂಜಲಿ ಹೇಳುತ್ತಾರೆ. ಯಾವುದಾದರೂ ಒಂದು ವಿಷಯ ಅಥವಾ ವಸ್ತುವನ್ನು ತೆಗೆದುಕೊಂಡು ಅದರಲ್ಲಿ ಮನಸ್ಸನ್ನು ಏಕಾಗ್ರಗೊಳಿಸುವ ಅಭ್ಯಾಸವನ್ನು 'ಏಕತತ್ತ್ವಾಭ್ಯಾಸ' ಎಂದು ಕರೆಯುತ್ತಾರೆ. ಈ ಅಭ್ಯಾಸವು ಹೇಗಿರಬೇಕು? **ಸ ತು ದೀರ್ಘಕಾಲ ನೈರಂತರ್ಯ ಸತ್ಕಾರಾಸೇವಿತೋ ದೃಢಭೂಮಿಃ** – "ಈ ಅಭ್ಯಾಸವನ್ನು ಆದರಪೂರ್ವಕವಾಗಿ, ನಿರಂತರವಾಗಿ ದೀರ್ಘಕಾಲ ಮಾಡಿದರೆ ಅದು ದೃಢವಾಗಿ ಬೇರೂರುತ್ತದೆ." ಆದರಪೂರ್ವಕವಾಗಿ ಅಭ್ಯಾಸ ಮಾಡುವುದೆಂದರೆ ಅದರಲ್ಲಿ ಅಸಡ್ಡೆ ಇರಬಾರದು, ನಿಷ್ಠೆಯಿಂದ ಮಾಡಬೇಕು ಎಂದರ್ಥ. ಸಾಧನನಿಷ್ಠೆಯ ಕುರಿತಾಗಿ ಸ್ವಾಮಿ ಯತೀಶ್ವರಾನಂದರು ಹೇಳುತ್ತಾರೆ: "ದೈನಂದಿನ ಆಧ್ಯಾತ್ಮಿಕ ಸಾಧನೆಗೆ ಸಮಯ ಮಾಡಿಕೊಳ್ಳಲು ನಮಗೆ ಸಾಧ್ಯವಾಗದಿದ್ದರೆ ನಾವು ಪ್ರಗತಿಯನ್ನು ಸಾಧಿಸಲಾರೆವು. ಅನೇಕರಿಗೆ ಇದು ಅರ್ಥವಾಗುವುದಿಲ್ಲ. ವ್ಯರ್ಥ ಚಟುವಟಿಕೆ, ಅಲೆದಾಟ, ಹರಟೆ, ಕೆಲಸಕ್ಕೆ ಬಾರದ ಯೋಚನೆಗಳು – ಇವುಗಳಿಗೆ ಸಮಯ ಹಾಳು ಮಾಡುವುದನ್ನು ನಿಲ್ಲಿಸಬೇಕು. ಆಗ ನಮ್ಮ ಆಧ್ಯಾತ್ಮಿಕ ಸಾಧನೆಗೆ ಹೆಚ್ಚು ಸಮಯ ಸಿಕ್ಕುತ್ತದೆ. ಕೆಲವೇ ನಿಮಿಷ ಹೇಗೋ ಮನಸ್ಸಿಗೆ ಬಂದಂತೆ ಧ್ಯಾನ ಮಾಡುವುದರಿಂದ ಏನೂ ಪ್ರಯೋಜನವಾಗದು. ಸಾಧ್ಯವಾದಷ್ಟೂ ಸಮಯವನ್ನು ಉಳಿಸಿಕೊಳ್ಳಬೇಕು. ಅನಾವಶ್ಯಕವಾಗಿ ದೈಹಿಕ ಶಕ್ತಿಯನ್ನು ವ್ಯಯಿಸಬಾರದು. ಈಗಿನ ಕಾಲದಲ್ಲಿ ಅತಿಯಾಗಿ ದೈಹಿಕ ಶಕ್ತಿಯನ್ನು ವೃಥಾ ಹಾಳು ಮಾಡುತ್ತಿರುವರು. ಅತಿಯಾದ ಮಾನಸಿಕ ಚಂಚಲತೆ ಕಂಡುಬರುತ್ತಿದೆ. ಎಲ್ಲೆಲ್ಲಿಯೂ ಸುಳಿಗಳೇ. ತೀವ್ರವಾದ ಆಧ್ಯಾತ್ಮಿಕ ಸಾಧನೆಯ ಭಾವವನ್ನು ಬೆಳಸಿಕೊಳ್ಳಬೇಕಾದರೆ ಈ ಸುಳಿಯಿಂದ ಹೊರಬರಬೇಕು" ('ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ', ಪು. ೨೯೩).

ಸಾಧನೆಯಲ್ಲಿ ಆದರ ಮತ್ತು ನಿಷ್ಠೆ ಇಲ್ಲದಿದ್ದರೆ ಯಾವುದಾದರೂ ಒಂದು ನೆಪವನ್ನು ಒಡ್ಡಿ ಅದರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ಯಾವುದಾದರೂ ಕೆಲಸದ ಅಥವಾ ದಣಿವಿನ ನೆಪ ಅಥವಾ ಇನ್ನೇನಾದರೂ ನೆಪವನ್ನು ಮುಂದಿಟ್ಟು ಸಾಧನೆಯನ್ನು ಮುಂದೂಡುತ್ತೇವೆ. ಮನಸ್ಸು ನಮ್ಮನ್ನು ಹೇಗೆ ವಂಚಿಸುತ್ತದೆ ಎಂಬುದರ ಬಗ್ಗೆ ಸ್ವಾಮಿ ಯತೀಶ್ವರಾನಂದರು ಹೀಗೆ ಹೇಳುತ್ತಾರೆ: "ನಮಗಿನ್ನೂ ಸೂಕ್ಷ್ಮತೆ ಸಾಲದು. ನಮ್ಮ ಉದ್ದೇಶಗಳನ್ನು ಸ್ಪಷ್ಟವಾಗಿ ತಿಳಿಯಲಾರೆವು. ನಮ್ಮ ಯೋಚನೆ ಮತ್ತು ಕೃತಿಗಳಿಗೆ ಮೇಲ್ನೋಟಕ್ಕೆ ಬಹಳ ಸರಿಯೆನಿಸುವ ಕಾರಣಗಳನ್ನು ಕೊಟ್ಟು ನಮ್ಮನ್ನು ನಾವೇ ವಂಚಿಸಿಕೊಳ್ಳುತ್ತೇವೆ. ಆಧ್ಯಾತ್ಮಿಕ ಸಾಧನೆಯ ತೀವ್ರ ಪರಿಶ್ರಮದ ವಿರುದ್ಧ ಮನಸ್ಸು ಗಲಾಟೆ ಮಾಡಿದರೆ ಅದನ್ನು ತರಾಟೆಗೆ ತೆಗೆದುಕೊಳ್ಳಬೇಕು. ಉನ್ನತ ಜೀವನ ನಮಗೆ ಬೇಕಿದ್ದರೆ ಆ ಪ್ರಯತ್ನದಲ್ಲಿ ಸಾಯುವುದಕ್ಕೂ ನಾವು ಸಿದ್ಧರಿರಬೇಕು. ಮನಸ್ಸು ಯಾವಾಗಲೂ ವಿರೋಧಿಸುತ್ತಲೇ ಗೊಣಗುತ್ತಲೇ ಇರುತ್ತದೆ. ಅದು ಹೇಳುತ್ತದೆ: 'ನೋಡು, ಇವತ್ತು ನೀನು ಸ್ವಲ್ಪವೇ ನಿದ್ರೆ ಮಾಡಿದ್ದು. ಇದು ನಿನ್ನ ನರಗಳಿಗೆ ಒಳ್ಳೆಯದಲ್ಲ. ನಿನ್ನ ನರಮಂಡಲಕ್ಕೆ ಹಾನಿಯಾಗಬಹುದು, ಎಚ್ಚರಿಕೆ. ಒಂದೆರೆಡು ದಿನ ನಿನ್ನ ಸಾಧನೆಯನ್ನು ನಿಲ್ಲಿಸು.' ಅಂಥ ಸಂದರ್ಭದಲ್ಲಿ ಅದಕ್ಕೆ ಒಂದು ಒದೆತ ಕೊಡಬೇಕು. ಕುದುರೆ ಸರಿಯಾಗಿ ಓಡದಿದ್ದರೆ ಸವಾರ ಅದಕ್ಕೆ ಛಡಿ ಏಟು ಕೊಡುವಂತೆ ಮನಸ್ಸನ್ನೂ ತರಾಟೆಗೆ ತೆಗೆದು ಕೊಳ್ಳಬೇಕು" ('ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ', ಪು. ೨೯೩).

ಈ ಅಭ್ಯಾಸವು ನಿರಂತರವಾಗಿ ಸಾಗಬೇಕು. ಶ್ರೀಶಂಕರಾಚಾರ್ಯರು 'ವಿವೇಕಚೂಡಾಮಣಿ' ಯಲ್ಲಿ ಹೇಳುತ್ತಾರೆ:

**ನಿದ್ರಾಯಾ ಲೋಕವಾರ್ತಾಯಾ : ಶಬ್ದಾದೇರಪಿ ವಿಸ್ಮೃತೇ : ।**
**ಕ್ವಚಿನ್ನಾವಸರಂ ದತ್ವಾ ಚಿಂತಯಾತ್ಮಾನಮಾತ್ಮನಿ ॥ (೨ : ೮೬)**

"ನಿದ್ರೆಗಾಗಲಿ, ಕಾಡುಹರಟೆಗಾಗಲಿ, ಶಬ್ದಾದಿ ವಿಷಯ ವಸ್ತುಗಳಿಗಾಗಲಿ ಮತ್ತು ಮರೆವಿಗಾಗಲಿ ಸ್ವಲ್ಪವೂ ಅವಕಾಶವನ್ನು ಕೊಡದೆ ಅಂತರಂಗದಲ್ಲಿ ಆತ್ಮಚಿಂತನೆ ಮಾಡಬೇಕು."

ಸಾಧನೆಯಲ್ಲಿ ನಿರಂತರತೆ ಇರಬೇಕೆಂಬುದನ್ನು ಆಚಾರ್ಯರು ಇಲ್ಲಿ ಒತ್ತಿ ಹೇಳುತ್ತಿದ್ದಾರೆ. ಕೆಲವರು ತುಂಬ ಉತ್ಸಾಹದಿಂದ ಕೆಲವು ಕಾಲ ಸಾಧನೆ ಮಾಡಿ ಅನಂತರ ಬಿಟ್ಟುಬಿಡುತ್ತಾರೆ. ಮುಂದೆ ಇನ್ನೊಂದು ಸಂದರ್ಭದಲ್ಲಿ ಹೊಸ ಸ್ಫೂರ್ತಿಯನ್ನು ಪಡೆದು ಮತ್ತೆ ಪ್ರಾರಂಭಿಸುತ್ತಾರೆ, ಮತ್ತೆ ಬಿಡುತ್ತಾರೆ. ಅನೇಕ ಬಗೆಯ ಆಕರ್ಷಣೆ ಮತ್ತು ಒತ್ತಡಗಳಿಗೆ ಮನಸ್ಸು ಒಳಗಾಗಿ ಸಾಧನೆಯಿಂದ ವಿಮುಖವಾಗುತ್ತದೆ. ಹೆಸರು ಕೀರ್ತಿ ಸ್ಥಾನಮಾನಗಳ ಆಕರ್ಷಣೆಗೆ ಒಳಗಾಗಿ ಏನನ್ನಾದರೂ ಸಾಧಿಸಲು ಪ್ರಾರಂಭಿಸುತ್ತೇವೆ. ಇದು ಮುಗಿದ ನಂತರ ತೀವ್ರವಾಗಿ ಸಾಧನೆಯನ್ನು ಪ್ರಾರಂಭಿಸುತ್ತೇನೆ ಎಂದು ತೀರ್ಮಾನಿಸುತ್ತೇವೆ. ಅದು ಮುಗಿದ ನಂತರ ಇನ್ನೊಂದು ಅಂಟಿಕೊಳ್ಳುತ್ತದೆ. ನಮ್ಮೊಳಗಿರುವ ಆಸಕ್ತಿಯೇ ಜಗದ್ಧಿತ ಪ್ರವೃತ್ತಿಯಾಗಿ ತೋರಿಕೊಳ್ಳುತ್ತದೆ. ಜಗದ್ಧಿತವನ್ನು ಸಾಧಿಸುವ

ನೆಪದಲ್ಲಿ ನಮ್ಮ ಅಹಂಕಾರವನ್ನು ಪೋಷಿಸುತ್ತ ಹೋಗುತ್ತೇವೆ. ಇದರಿಂದಾಗಿ ಕೆಲಸ, ಸಮಸ್ಯೆ, ಚಿಂತೆ ಮುಂತಾದ ಒತ್ತಡಗಳು ಉಂಟಾಗಿ ಮನಸ್ಸು ಚಂಚಲವಾಗುತ್ತದೆ. ಈ ಚಂಚಲತೆಯಿಂದಾಗಿ ಸಾಧನೆಯ ನೈರಂತರ್ಯಕ್ಕೆ ಭಂಗವುಂಟಾಗುತ್ತದೆ. ಹೀಗೆ ಮನಸ್ಸು ಬೇರೆ ದಿಕ್ಕಿಗೆ ತಿರುಗಿದಾಗಲೆಲ್ಲ ಅದನ್ನು ಎಳೆದು ತಂದು ಆತ್ಮನಲ್ಲಿ ನೆಲೆಗೊಳಿಸಬೇಕೆಂದು ಶ್ರೀಕೃಷ್ಣನು ಹೇಳುತ್ತಾನೆ :

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ (೬ : ೨೬ )**

"ಚಂಚಲವೂ ಅಸ್ಥಿರವೂ ಆದ ಮನಸ್ಸು ಯಾವ ಯಾವ ವಿಷಯದಿಂದ ಹೊರಕ್ಕೆ ಬರುವುದೋ ಆಯಾ ವಿಷಯದಿಂದ ಅದನ್ನು ನಿಗ್ರಹಿಸಿ ಆತ್ಮನಲ್ಲಿಯೇ ವಶಪಡಿಸಿಕೊಳ್ಳಬೇಕು."

ಸಾಧನೆಯನ್ನು ಕೆಲಕಾಲ ಬಿಟ್ಟು ಮತ್ತೆ ಮುಂದುವರಿಸಿದರೆ, ಪ್ರಾರಂಭದಿಂದಲೇ ಶುರುಮಾಡಬೇಕಾಗುತ್ತದೆ. ವಿದ್ಯಾಭ್ಯಾಸವನ್ನು ಕೆಲವು ವರ್ಷ ನಿಲ್ಲಿಸಿದರೆ ಮತ್ತೆ ಪ್ರಾರಂಭದ ಪಾಠದಿಂದಲೇ ಮುಂದುವರಿಸಬೇಕಾಗುತ್ತದೆ. ಇದರಿಂದ ತುಂಬ ಸಮಯ ವ್ಯರ್ಥವಾಗುತ್ತದೆ. ಮುಂದೆ ಒಂದು ನಿರರ್ಥಕತೆಯ ಭಾವ ಉಂಟಾದರೆ ಸಾಧನೋತ್ಸಾಹವೇ ಹೊರಟುಹೋಗುತ್ತದೆ. ಆದರೆ ಸಾಧನೆಯಲ್ಲಿ ನಿರಂತರತೆಯನ್ನು ಉಳಿಸಿಕೊಂಡರೆ – ಎಷ್ಟೇ ಅಡಚಣೆಗಳು ಬಂದರೂ – ಕ್ರಮೇಣ ಮನಸ್ಸು ನಮ್ಮ ವಶಕ್ಕೆ ಬರುತ್ತದೆ. ಬಾಹ್ಯ ಸಾಧನೆಯಲ್ಲಾದರೆ ಬಹುಬೇಗ ಅದರ ಫಲ ಕಂಡುಬರುತ್ತದೆ. ಒಂದು ಹೂವಿನ ಗಿಡವನ್ನು ನೆಟ್ಟರೆ ಕೆಲವೇ ದಿನಗಳಲ್ಲಿ ಅಥವಾ ತಿಂಗಳುಗಳಲ್ಲಿ ಅದು ಹೂಬಿಡಲು ಪ್ರಾರಂಭಿಸುತ್ತದೆ. ಒಬ್ಬ ವ್ಯಕ್ತಿ ಚೆನ್ನಾಗಿ ದುಡಿದರೆ ಕೆಲವೇ ವರ್ಷಗಳಲ್ಲಿ ದೊಡ್ಡ ಶ್ರೀಮಂತನಾಗಿಬಿಡಬಹುದು. ಹೀಗೆ ವಿವಿಧ ಕ್ಷೇತ್ರಗಳಲ್ಲಿ ಬಹುಬೇಗನೆ ಪ್ರಾವೀಣ್ಯತೆಯನ್ನು ಪಡೆಯಬಹುದು. ಈಗ ನಾವು 'ಶೀಘ್ರಪ್ರಾಪ್ತಿ'ಯ ಯುಗದಲ್ಲಿದ್ದೇವೆ – ಎಲ್ಲವೂ ಬಹುಬೇಗನೆ ಆಗಿಬಿಡಬೇಕು. ಆದರೆ ಆಧ್ಯಾತ್ಮಿಕ ಸಾಧನೆಯಲ್ಲಿ ಈ ದಿಢೀರತೆ ನಡೆಯುವುದಿಲ್ಲ – ಇಲ್ಲಿ ಸಾಧನೆಯ ಅಲ್ಪ ಫಲವನ್ನು ನಾವು ಗುರುತಿಸಬೇಕಾದರೆ ಹಲವು ವರ್ಷ ಕಾಯ ಬೇಕಾಗುತ್ತದೆ. ಬೆಂಗಳೂರಿನಂತಹ ಊರಿನ ಟ್ರಾಫಿಕ್ ಜಾಮ್ ಇರುವ ರಸ್ತೆಯಲ್ಲಿ ವಾಹನವನ್ನು ನಡೆಸಿದಂತೆ ಇದು. ಒಂದು ಅಡಿ ಮುಂದುವರಿಯಲೂ ಅರ್ಧಘಂಟೆ ಬೇಕಾಗುತ್ತದೆ. ನಾವು ಮುಂದಕ್ಕೆ ನೋಡದೆ, ಹಿಂದಕ್ಕೆ ನೋಡಿಕೊಳ್ಳುತ್ತ ನಾವು ಎಷ್ಟು ಮುಂದುವರಿದಿದ್ದೇವೆ ಎಂದು ಸಮಾಧಾನಪಟ್ಟುಕೊಳ್ಳಬೇಕಾ ಗುತ್ತದೆ. ಹಾಗೆಯೇ ಆಧ್ಯಾತ್ಮಿಕ ಸಾಧನೆಯಲ್ಲಿಯೂ ಪ್ರಗತಿ ಮಂದಗತಿಯಲ್ಲಿ ಸಾಗುತ್ತದೆ. ಮುಖ್ಯವಾಗಿ ಇದು ನಮ್ಮ ವೈರಾಗ್ಯದ ತೀವ್ರತೆಯನ್ನು ಅವಲಂಬಿಸಿರುತ್ತದೆ. ಅದಕ್ಕೇ ಶ್ರೀಕೃಷ್ಣನು ಹೇಳುತ್ತಾನೆ : **ಅನೇಕ ಜನ್ಮಸಂಸಿದ್ಧಃ ತತೋ ಯಾತಿ ಪರಾಂ ಗತಿಮ್ ।** – "ಅನೇಕ ಜನ್ಮಗಳ ಸಾಧನೆಯ ಫಲವಾಗಿ ಸಾಧಕನು ಪರಮ ಗತಿಯನ್ನು ಪಡೆಯುತ್ತಾನೆ." ಸಾಧನೆಯು ಒಂದು ಜನ್ಮದ ವಿಷಯವಲ್ಲ. ಸ್ವಾಮಿ ಅದ್ಭುತಾನಂದರು ಹೀಗೆ ಹೇಳುತ್ತಾರೆ : "ಸಾಧನೆ ಏನು ಒಂದೇ ಜನ್ಮದಲ್ಲಿ ಆಗುವುದೇ? ಭಗವಾನ್ ವಿಷ್ಣುವಿನ ದರ್ಶನವನ್ನು ಪಡೆದ ಬಾಲಕ ಧ್ರುವನ ಮನಸ್ಸಿನಲ್ಲಿ ಒಮ್ಮೆ ಮಹಾ ಅಹಂಕಾರ ಉಂಟಾಯಿತು. ಇಷ್ಟು ಕಡಿಮೆ ಸಾಧನೆಯಲ್ಲಿಯೇ ಭಗವಂತ ಸಿಕ್ಕಿದನಲ್ಲ ಎಂದು ಅವನು ಮನಸ್ಸಿನಲ್ಲಿಯೇ ಚಿಂತಿಸತೊಡಗಿದನು. ಆ ಸಮಯಕ್ಕೆ ಸರಿಯಾಗಿ ದೇವರ್ಷಿ ನಾರದರು ಬಂದು ತಮ್ಮೊಡನೆ ತಿರುಗಾಡಲು ಧ್ರುವನನ್ನು ಕರೆದುಕೊಂಡು ಹೋದರು. ಹಾಗೇ ಅಲೆದಾಡುತ್ತ ಒಂದು ದೊಡ್ಡ ಬೆಟ್ಟದೆಡೆಗೆ ಬಂದು ಸೇರಿದರು. ಬಾಲಕನು ದೇವರ್ಷಿಯನ್ನು ಅದೇನೆಂದು ಕೇಳಿದನು. 'ಅದೊಂದು ಮೂಳೆಯ ಬೆಟ್ಟ. ನೀನೆಷ್ಟು ಬಾರಿ ಇಲ್ಲಿಗೆ (ಭೂಮಿಗೆ) ಬಂದುಹೋಗಿರುವೆಯೊ, ಆ ಎಲ್ಲ ಜನ್ಮಗಳ ಮೂಳೆಗಳನ್ನು ಇಲ್ಲಿ ಶೇಖರಿಸಲಾಗಿದೆ' ಎಂದು ನಾರದರು ಹೇಳಿದರು. ಈ ಮಾತನ್ನು ಕೇಳಿ ಬಾಲಕ ಏನು ಹೇಳಿದ ಗೊತ್ತೆ? – 'ನಾನು ಇಷ್ಟೊಂದು ಬಾರಿ ಇಲ್ಲಿಗೆ ಬರಬೇಕಾಯಿತೇ' ಎಂದು ಅತ್ಯಾಶ್ಚರ್ಯವನ್ನು ವ್ಯಕ್ತಪಡಿಸಿದನು. ಇದನ್ನೆಲ್ಲ ನೋಡಿದ ಮೇಲೆ ಧ್ರುವನ ಅಹಂಕಾರ ದೂರವಾಯಿತು. ಆದ್ದರಿಂದಲೇ ಹೇಳುತ್ತೇನೆ, ಸಾಧನೆ ಒಂದು ಜನ್ಮದ ವಿಷಯವಲ್ಲ. ಯಾವಾವ ಜನ್ಮದಲ್ಲಿ ಎಷ್ಟೆಷ್ಟು ಸಾಧನೆ ಮಾಡುವೆವೊ ಅಷ್ಟಷ್ಟು ಜಮ ಉಳಿಯುವುದು. ಯಾವಾಗ ಜಮ ಅತ್ಯಧಿಕವಾಗುವುದೊ ಆಗ ಅಸಲಂತೂ ಸಿಕ್ಕಿಯೇ ಸಿಗುತ್ತದೆ, ಅಷ್ಟೇ ಅಲ್ಲದೆ ಬಡ್ಡಿಯೂ ಕೂಡ ಸಿಗುತ್ತದೆ. ಅಂದರೆ, ಸಾಧು ಸದ್ಗುರುವಿನ ಕೃಪೆ ದೊರೆಯುತ್ತದೆ. ಈ ರೀತಿ ಬಡ್ಡಿ ಸಿಕ್ಕಿದರೆ ಸಾಧಕರಿಗೆ ಮಹದಾನಂದವಾಗುತ್ತದೆ. ಅವರು ಆಗ ಅಸಲನ್ನು ಸಂಪಾದಿಸಲು ಸಾಧನೆ ಮಾಡುತ್ತಾರೆ. ಈಶ್ವರ ದರ್ಶನವಾದ ಮೇಲೆ ಅಸಲು ಪ್ರಾಪ್ತಿಯಾಗುತ್ತದೆ" (*ಅದ್ಭುತವಾಣಿ, ೬೫*).

ಮತ್ತೆ ಅವರು ಹೇಳುತ್ತಾರೆ: "ಲಕ್ಷವರ್ಷಗಳ ನಂತರ ಭಗವತ್ಸಾಕ್ಷಾತ್ಕಾರವಾಗುವುದೆಂದು ಕೇಳಿ ಒಬ್ಬ ಭಕ್ತನು ಸಂತೋಷದಿಂದ ನರ್ತಿಸಿದನು. ಅದರಿಂದಲೇ ಅವನು ಸುಪ್ರೀತನಾಗಿ ಹೇಳಿದನು: 'ಅನಂತಕಾಲ, ಅದಕ್ಕೆ ಹೋಲಿಸಿದರೆ ಲಕ್ಷವರ್ಷಗಳು ಏನು ಮಹಾ!' ಅವನ ಭಾವವು ಏನಿತ್ತು ಗೊತ್ತೇ? ಭಗವಂತನು ಎಂದು ದೊರೆಯುವನೊ, ಆಗ ಆ ಲಕ್ಷ ವರ್ಷಗಳು ಸಂಪೂರ್ಣ ವ್ಯರ್ಥವಾಗುವುದಿಲ್ಲ! ಪ್ರತಿ ಜನ್ಮದಲ್ಲಿಯೂ ಅವನು ಹೆಚ್ಚು ಹೆಚ್ಚು ಪವಿತ್ರನಾಗುತ್ತ ಬರುವನು – ಈ ಆನಂದದಲ್ಲಿಯೇ ಅವನು ನರ್ತಿಸಿದನು." (*ಅದ್ಭುತವಾಣಿ, ೬೦*) ಭಗವತ್‍ಪ್ರಾಪ್ತಿಯು ಅದೆಷ್ಟು ಮಹತ್ತರವಾದುದೆಂದರೆ ಅದಕ್ಕೆ ಯಾವುದೇ ಬೆಲೆಕೊಡಲೂ ಸಾಧಕನು ಸಿದ್ಧನಿರಬೇಕು, ಅಲ್ಲಿ ಚೌಕಾಶಿ ನಡೆಯುವುದಿಲ್ಲ. ಸಾಧನೆ ಎಷ್ಟೇ ಸುದೀರ್ಘವಾದರೂ ಎದೆಗುಂದಬಾರದು ಎಂಬುದು ಇದರ ವೈಶಿಷ್ಟ್ಯ. (ಮುಂದುವರೆಯುವುದು)

**ವಂಶಾನುಗತವಾಗಿ ಬಂದ ರೈತನು ಹನ್ನೆರಡು ವರ್ಷ ಮಳೆ ಇಲ್ಲದೆ ಇದ್ದರೂ ಹೊಲ ಉಳುವುದನ್ನು ಬಿಡುವುದಿಲ್ಲ. ಆದರೆ ಆಗತಾನೆ ಬೇಸಾಯಕ್ಕೆ ತಿರುಗಿದ ರೈತನಾದರೋ ಒಂದು ಸಲ ಮಳೆ ಬೀಳದೆ ಇದ್ದರೆ ನಿರಾಶನಾಗುವನು. ನಿಜವಾದ ಭಕ್ತ ಜೀವನವೆಲ್ಲ ಸಾಧನೆ ಮಾಡಿ ದೇವರನ್ನು ಕಾಣದೆ ನಿರಾಶನಾಗುವುದಿಲ್ಲ.**

–ಶ್ರೀರಾಮಕೃಷ್ಣ

ಬುದ್ಧನ ಧರ್ಮ ಅನುಷ್ಠಾನಪ್ರದವಾದುದು. ಅವನ ಉಪದೇಶಗಳಲ್ಲಿ ಹಲವಾರು ರೀತಿಯ ಸಾಧನಾಮಾರ್ಗಗಳನ್ನು ಕಾಣುತ್ತೇವೆ. ಮೂಲ ಪಾಲಿಗ್ರಂಥದಲ್ಲಿ ಇರುವ ಅಂಥ ಕೆಲವು ಅಮೂಲ್ಯ ಬೋಧನೆಗಳ ಸಂಗ್ರಹವನ್ನು ಈ ಲೇಖನದಲ್ಲಿ ನೋಡುತ್ತೇವೆ. ಇದನ್ನು ಸಮರ್ಥವಾಗಿ ಅನುವಾದಿಸಿ ಸಂಗ್ರಹ ಮಾಡಿಕೊಟ್ಟಿರುವ ಸ್ವಾಮೀಜಿಯವರು ಸಂಸ್ಕೃತ, ದರ್ಶನ ಮತ್ತು ವೇದಾಂತ ವಿಷಯಗಳಲ್ಲಿ ಆಳವಾದ ಅಧ್ಯಯನ ಮಾಡಿದ್ದಾರೆ. ಸದ್ಯ ಅವರು ಮೈಸೂರಿನ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

## ಆಧ್ಯಾತ್ಮಿಕ ಸಾಧನೆಯ ವಿಷಯದಲ್ಲಿ

# ಬುದ್ಧನ ಸಲಹೆಗಳು

ಸ್ವಾಮಿ ಕರುಣಾಕರಾನಂದ

ಬುದ್ಧನ ಸಾಧನಾಜೀವನ, ಅನೇಕ ಏಳುಬೀಳುಗಳ ಪ್ರಯೋಗಗಳಿಂದ ಪರಿಪಕ್ವಗೊಂಡ, ನೇರ ಅನುಭವ ಹಾಗೂ ಶ್ರದ್ಧೆಯಿಂದ ಸಮೃದ್ಧವಾದ, ಹೃದಯಕ್ಕೆ ಒಪ್ಪುವ ಒಂದು ಸುಂದರ ಕೈದೋಟ. ಅವನ ಸಾಧನಾವಿಧಾನಗಳಲ್ಲಿ, ಅಂಥ ಕೈದೋಟದಲ್ಲಿ ಬೆಳೆಗೆ ಬೀಜವನ್ನು ಬಿತ್ತುವುದು, ಕಳೆ ಕೀಳುವುದು, ಗೊಬ್ಬರ ಹಾಕುವುದು, ಪ್ರೀತಿಯಿಂದ ಸಲಹುತ್ತ ಫಲ ಬರುವವರೆಗಿನ ಎಲ್ಲ ಮಾಹಿತಿಗಳೂ ನಮಗೆ ಸಿಗುತ್ತವೆ. ಮಹಾನ್ ಮನಶ್ಶಾಸ್ತ್ರಜ್ಞನಾದ ಭಗವಾನ್ ಬುದ್ಧನ ಒಳನೋಟ ಅದ್ಭುತವಾದುದು. ಅವನ ಮಾತುಗಳು ಬಹಳಷ್ಟು ಕಡೆ ಪುನರಾವರ್ತನೆಗೊಂಡಂತೆ ನಮಗೆ ಕಂಡರೂ ಅವುಗಳಿಗೆ ತಮ್ಮದೇ ಆದ ಒಂದು ಮಹತ್ವವಿದೆ. ಪುರಾತನ ಕಾಲದ ಪತಂಜಲಿಯ ಮಹಾಭಾಷ್ಯ ಗ್ರಂಥದಲ್ಲಿ ಕಂಡುಬರುವಂಥ ಸಂಭಾಷಣಾ ಶೈಲಿ ನಮಗೆ ಅಲ್ಲಿ ಕಂಡುಬರುತ್ತದೆ. ತಾನೇ ಪ್ರಶ್ನೆಯನ್ನೆತ್ತಿ ಸಂವಾದದ ರೀತಿಯಲ್ಲಿ ಉತ್ತರಿಸುವ ಬಗೆ, ಸರಳ ವ್ಯಾಖ್ಯಾನ, ಉದಾಹರಣೆಗಳ ಹೂರಣಗಳಿಂದ ಕೇಳುಗರ ಮನಸ್ಸಿಗೆ ಉಂಟಾಗುವ ಮುದ, ಬೇಸರಗೊಳ್ಳದೆ ಮತ್ತೆ ಮತ್ತೆ ಹೇಳುವುದು, ಕೇಳುಗನ ಹೃದಯದಲ್ಲಿ ತಾನೂ ಇದನ್ನು ಸಾಧಿಸಬಹುದೆಂಬ ಧೈರ್ಯ–ವಿಶ್ವಾಸಗಳನ್ನು ಮೂಡಿಸುವುದು –ಇವೆಲ್ಲವೂ ಒಬ್ಬ ಮಹಾಪುರುಷನ ಉಪದೇಶ ಶೈಲಿ. ಅವನ್ನು ಬುದ್ಧನ ಬೋಧನೆಗಳಲ್ಲಿ ನಾವು ಕಾಣುತ್ತೇವೆ.

### ಮನಸ್ಸಿನ ಆಲೋಚನೆಗಳಿಗೆ ಹೇಗೆ ಕಡಿವಾಣ ಹಾಕುವುದು?

ಎಲ್ಲರ ಪ್ರಶ್ನೆಯೂ ಇದೇ. ಹುಚ್ಚು ಕುದುರೆಯಂತೆ ಓಡುತ್ತಿರುವ, ಹತೋಟಿಗೆ ಸಿಕ್ಕದ ಮನಸ್ಸನ್ನು ನಮ್ಮ ವಶಪಡಿಸಿಕೊಳ್ಳುವುದು ಹೇಗೆ? ಬುದ್ಧನು ವಿತಕ್ಕಸಣ್ಠಾನ ಸುತ್ತದಲ್ಲಿ (ಮಜ್ಝಿಮ ನಿಕಾಯ) ಈ ಸಮಸ್ಯೆಗೆ ಹಲವು ಹಂತಗಳಲ್ಲಿ ಪರಿಹಾರವನ್ನು ಸೂಚಿಸುತ್ತಾನೆ. ನಮ್ಮ ಅಕುಶಲವಾದ ಆಸೆ, ದ್ವೇಷ ಹಾಗೂ ಮೋಹಗಳಿಂದ ಕೂಡಿದ ಆಲೋಚನೆಗಳನ್ನು ಕಳೆದುಕೊಂಡು, ಸಮಾಧಿಯನ್ನು ಬೆಳೆಸಿಕೊಳ್ಳಬೇಕಾದರೆ ಐದು ಉಪಾಯಗಳನ್ನು ಅನುಸರಿಸಬೇಕು: ೧. ಮೊದಲನೆಯದಾಗಿ, ಒಬ್ಬ ಬಡಗಿಯು ಹೇಗೆ ಒಂದು ಸಣ್ಣ ಬೆಣೆಯನ್ನು ಉಪಯೋಗಿಸಿ ದೊಡ್ಡ ಬೆಣೆಯನ್ನು ತೆಗೆಯುವನೋ, ಹಾಗೆಯೇ ಸಾಧಕನಾದವನು ಕುಶಲವಾದ ಆಲೋಚನೆಗಳಿಂದ ಅಕುಶಲವಾದ ಆಲೋಚನೆಗಳನ್ನು ತೊಡೆದುಹಾಕಬಹುದು. ೨. ಎರಡನೆಯದಾಗಿ, ಇದರಿಂದಲೂ ಒಂದು ವೇಳೆ ಅಕುಶಲವಾದ ಆಲೋಚನೆಗಳು ನಿವಾರಣೆಯಾಗದೆ ಇದ್ದಲ್ಲಿ, ಅವುಗಳಿಂದಾಗುವ ಆಪತ್ತನ್ನು ಕುರಿತು ಪರೀಕ್ಷಿಸಬೇಕು. 'ಈ ನನ್ನ ಯೋಚನೆಗಳು ಅಕುಶಲವಾದುವು. ಈ ನನ್ನ ಯೋಚನೆಗಳು ತಪ್ಪಾದುವು. ಈ ನನ್ನ ಯೋಚನೆಗಳು ದುಃಖವನ್ನು ಕೊಡುವಂಥವು' ಎಂದು ಆಲೋಚಿಸಬೇಕು. ಹೀಗೆ ಅಕುಶಲ ಆಲೋಚನೆಗಳ ಆಪತ್ತನ್ನು ಬಿಡಿಸಿ ನೋಡಿದಾಗ ಅವು ನಾಶವಾಗುತ್ತವೆ. ಅವು ನಾಶವಾದಾಗ ಸಾಧಕನು ತನ್ನ ಮನಸ್ಸನ್ನು

ಸ್ತಿಮಿತಗೊಳಿಸುತ್ತಾನೆ, ಸಮಾಧಾನಗೊಳಿಸುತ್ತಾನೆ ಮತ್ತು ಏಕಾಗ್ರಗೊಳಿಸುತ್ತಾನೆ. ೩. ಮೂರನೆಯದಾಗಿ, ಒಂದು ವೇಳೆ ಆಪತ್ತನ್ನು ಪರೀಕ್ಷಿಸಿದಾಗಲೂ ಅಕುಶಲವಾದ ಆಲೋಚನೆಗಳು ಹೋಗದಿದ್ದರೆ, ಕಣ್ಣ ಮುಂದೆ ಬರುವ ಇಷ್ಟವಿಲ್ಲದ ವಸ್ತುಗಳನ್ನು ಹೇಗೆ ಕಣ್ಣುಮುಚ್ಚಿಕೊಂಡು ತಪ್ಪಿಸಿಕೊಳ್ಳುತ್ತೇವೆಯೋ, ಹಾಗೆ ಅಕುಶಲವಾದ, ಪಾಪಕಾರಿಯಾದ, ಆಸೆ–ದ್ವೇಷ ಹಾಗೂ ಮೋಹಗಳಿಂದ ಕೂಡಿರುವ ಆಲೋಚನೆಗಳನ್ನು ನೆನಪಿಗೆ ತಂದು ಕೊಳ್ಳಬಾರದು. ಹಾಗಾದಾಗ ಅವು ತಮ್ಮಷ್ಟಕ್ಕೇ ನಾಶವಾಗುತ್ತವೆ. ೪. ನಾಲ್ಕನೆಯದಾಗಿ, ಅಷ್ಟು ಮಾಡಿದರೂ ಅಕುಶಲವಾದ, ಪಾಪಕಾರಿ ಯಾದ ಆಲೋಚನೆಗಳು ಹೋಗದಿದ್ದರೆ ಆಲೋಚನೆಯಲ್ಲಿ ಹೊಂದಾಣಿಕೆಯನ್ನು ಸ್ತಿಮಿತವನ್ನು ತಂದುಕೊಳ್ಳಬೇಕು. ಅತ್ಯಂತ ವೇಗವಾಗಿ ಓಡುತ್ತಿರುವ ಒಬ್ಬ ಮನುಷ್ಯನು, "ಏಕೆ ನಾನು ಓಡಿ ಹೋಗುತ್ತಿದ್ದೇನೆ? ನಾನೇಕೆ ನಡೆದುಕೊಂಡು ಹೋಗಬಾರದು?" ಎಂದು ನಡೆದುಕೊಂಡು ಹೋಗಲು ಪ್ರಾರಂಭಿಸಿದರೆ ಹೋಗುವಾಗ ಅವನಿಗೆ ಅನಿಸುತ್ತದೆ, "ನಾನೇಕೆ ನಡೆದುಕೊಂಡು ಹೋಗುತ್ತಿದ್ದೇನೆ? ನಾನೇಕೆ ನಿಲ್ಲಬಾರದು?" ಎಂದು. ಆಗ ನಿಲ್ಲುತ್ತಾನೆ. ನಿಂತಿರುವಾಗ ತಾನೇಕೆ ನಿಂತಿದ್ದೇನೆ, ಏಕೆ ಕುಳಿತುಕೊಳ್ಳಬಾರದು ಎಂದು ಅವನಿಗೆ ಅನಿಸುತ್ತದೆ. ಆಗ ಕುಳಿತುಕೊಳ್ಳುತ್ತಾನೆ. ಕುಳಿತಿರುವಾಗ "ನಾನೇಕೆ ಕುಳಿತಿದ್ದೇನೆ? ನಾನೇಕೆ ಮಲಗಬಾರದು?" ಎಂದೆಣಿಸುತ್ತದೆ. ಆಗ ಮಲಗಿಕೊಳ್ಳುತ್ತಾನೆ. ಹೀಗೆ ನಿಧಾನವಾಗಿ ಯೋಚನೆಯ ಹೊಂದಾಣಿಕೆಯಿಂದ ಮನಸ್ಸಿನ ಸ್ತಿಮಿತವುಂಟಾಗುತ್ತದೆ. ತತ್ಫಲವಾಗಿ ಮನಸ್ಸಿನ ಏಕಾಗ್ರತೆ ಸಿದ್ಧಿಸುತ್ತದೆ. ೫. ಹಾಗೂ ಒಂದು ವೇಳೆ ಮನಸ್ಸಿನಲ್ಲಿ ಮೂಡುವ ಅಕುಶಲವಾದ, ಕೆಟ್ಟ ಆಲೋಚನೆಗಳು ಹೋಗದಿದ್ದರೆ ಬಲವಾಗಿ ಹಲ್ಲುಕಚ್ಚಿಕೊಂಡು, ನಾಲಿಗೆಯನ್ನು ತಾಲುವಿಗೆ (ಬಾಯಿಯ ಮೇಲ್ಭಾಗ) ಒತ್ತಿ ಮನಸ್ಸನ್ನು ಮನಸ್ಸಿನಿಂದಲೇ ನಿಗ್ರಹಿಸಿ, ಹಿಡಿತಕ್ಕೆ ತಂದು ಹತ್ತಿಕ್ಕಿ ದಾಗ ಪಾಪಕಾರಿಯಾದ, ದ್ವೇಷದಿಂದೊಡಗೂಡಿದ, ಅಕುಶಲ ಆಲೋಚನೆಗಳು ಹೋಗುತ್ತವೆ; ಮನಸ್ಸು ಏಕಾಗ್ರವಾಗುತ್ತದೆ.

**ಸತಿಪಟ್ಠಾನದಿಂದ ದುಃಖನಾಶ (ಸ್ಮೃತಿ ಪ್ರಸ್ಥಾನ):**

ಶೋಕವನ್ನು ತೊಡೆದುಹಾಕಲು, ಜೀವಿಗಳನ್ನು ವಿಶುದ್ಧಿ ಗೊಳಿಸಲು, ನ್ಯಾಯಮಾರ್ಗವನ್ನು ಸೇರಲು, ನಿರ್ವಾಣವನ್ನು ಸಾಕ್ಷಾತ್ಕರಿಸಿಕೊಳ್ಳಲು ನಾಲ್ಕು ಬಗೆಯ ಉಪಸ್ಸನ ಅಥವಾ ಉಪಾಸನೆ ಗಳನ್ನು ಹೇಳಲಾಗಿದೆ. ಅವು ಹೀಗಿವೆ: **೧. ಕಾಯಾನುಪಸ್ಸನ :** ಕಾಯವನ್ನು ಎಚ್ಚರಿಕೆಯಿಂದ ಧ್ಯಾನಿಸುವುದು **೨. ವೇದನಾನುಪಸ್ಸನ:** ವೇದನೆ ಯನ್ನು ಎಚ್ಚರಿಕೆಯಿಂದ ಧ್ಯಾನಿಸುವುದು **೩. ಚಿತ್ತಾನುಪಸ್ಸನ:** ಮನಸ್ಸಿನ ಸ್ಥಿತಿಗಳನ್ನು ಎಚ್ಚರಿಕೆಯಿಂದ ಧ್ಯಾನಿಸುವುದು **೪. ಧಮ್ಮಾನುಪಸ್ಸನ :** ಸ್ಮೃತಿ, ಕಲ್ಪನೆ, ಪ್ರಜ್ಞಪ್ತಿ, ಹೋಳಹು ಮುಂತಾದ ಮಾನಸಿಕ ವಿಷಯಗಳನ್ನು ಎಚ್ಚರಿಕೆಯಿಂದ ಧ್ಯಾನಿಸುವುದು.

**ಕಾಯಾನುಪಸ್ಸನ ವಿಧಿ**

**೧. ಆನಾಪಾನ ಸತಿ :** (ಆನ ಎಂದರೆ ಉಸಿರನ್ನು ಒಳಗೆ ಎಳೆದುಕೊಳ್ಳುವುದು, ಅಪಾನ ಎಂದರೆ ಉಸಿರನ್ನು ಹೊರಕ್ಕೆ ಬಿಡುವುದು– ಅದರ ಸ್ಮೃತಿ): ಕಾಯಾನುಪಸ್ಸನದಲ್ಲಿ ಆನಾಪಾನ ಸತಿ ಮೊದಲನೆಯದು. ಸಾಧಕನು ಜನರಹಿತವಾದ ಶುಚಿಯಾದ ಸ್ಥಳದಲ್ಲಿ ಪರ್ಯಂಕಾಸನವನ್ನು ತಳೆದು, ಶರೀರವನ್ನು ನೇರ ವಾಗಿಸಿಕೊಂಡು ಕುಳಿತುಕೊಳ್ಳುತ್ತಾನೆ. ಎಚ್ಚರಿಕೆಯಿಂದ ಉಸಿರನ್ನು ಒಳಗೆಳೆದುಕೊಳ್ಳುತ್ತಾನೆ, ಎಚ್ಚರಿಕೆಯಿಂದಲೇ ಉಸಿರನ್ನು ಹೊರ ಬಿಡುತ್ತಾನೆ. ನೀಳವಾಗಿ ಉಸಿರನ್ನು ಒಳಗೆಳೆದುಕೊಳ್ಳುವಾಗ, 'ನೀಳವಾಗಿ ಉಸಿರನ್ನು ಒಳಗೆಳೆದುಕೊಳ್ಳುತ್ತೇನೆ' ಎಂದು ಅರಿಯು ತ್ತಾನೆ. ನೀಳವಾಗಿ ಉಸಿರನ್ನು ಹೊರ ಬಿಡುವಾಗ, 'ನೀಳ ವಾಗಿ ಉಸಿರನ್ನು ಹೊರಬಿಡುತ್ತೇನೆ' ಎಂದು ಅರಿಯುತ್ತಾನೆ. ಕಿರಿದಾಗಿ ಉಸಿರನ್ನು ಒಳಗೆಳೆದುಕೊಳ್ಳುವಾಗ, 'ಕಿರಿದಾಗಿ ಉಸಿರನ್ನು ಒಳಗೆಳೆದುಕೊಳ್ಳುತ್ತೇನೆ' ಎಂದು ಅರಿಯುತ್ತಾನೆ. ಕಿರಿದಾಗಿ ಉಸಿರನ್ನು ಹೊರಬಿಡುವಾಗ, 'ಕಿರಿದಾಗಿ ಉಸಿರನ್ನು ಹೊರಬಿಡುತ್ತೇನೆ' ಎಂದು ಅರಿಯುತ್ತಾನೆ. ಹಾಗೆಯೇ, ಇಡೀ ಉಸಿರಿನ ಕಾಯವನ್ನು ಅಂದರೆ, ಉಸಿರಿನ ಉತ್ಪತ್ತಿ, ಸ್ಥಿತಿ ಮತ್ತು ಲಯಗಳನ್ನು ಎಚ್ಚರಿಕೆಯಿಂದ ಗಮನಿಸುತ್ತ, 'ನಾನು ಉಸಿರನ್ನು ಒಳಗೆ ಎಳೆದುಕೊಳ್ಳುತ್ತಿದ್ದೇನೆ', 'ನಾನು ಉಸಿರನ್ನು ಹೊರಕ್ಕೆ ಬಿಡು ತ್ತಿದ್ದೇನೆ' ಎಂದು ಪ್ರಜ್ಞಾಪೂರ್ವಕವಾಗಿ ಅಂದುಕೊಳ್ಳುತ್ತಾನೆ.

**೨. ಇರಿಯಾಪಥಸತಿ(ಈರ್ಯಾಪಥಸ್ಮೃತಿ):** ಕಾಯಾನುಪಸ್ಸನದಲ್ಲಿ ಇರಿಯಾಪಥಸತಿ ಎರಡನೆಯ ಸಾಧನೆ. ಈರ್ಯಾ ಎಂದರೆ ದೇಹದ ಚಲನ–ವಲನ. ಸಾಧಕನು ನಡೆಯುತ್ತಿರುವಾಗ, 'ನಾನು ನಡೆಯುತ್ತಿದ್ದೇನೆ' ಎಂದು ಪ್ರಜ್ಞಾಪೂರ್ವಕವಾಗಿ ಅರಿಯುತ್ತಾನೆ. ಹಾಗೆಯೇ, ನಿಂತಿರುವಾಗ, 'ನಾನು ನಿಂತಿದ್ದೇನೆ' ಎಂದು ಅರಿಯುತ್ತಾನೆ. ಕುಳಿತಿರುವಾಗ, 'ನಾನು ಕುಳಿತಿದ್ದೇನೆ' ಎಂದೂ, ಮಲಗಿರುವಾಗ, 'ನಾನು ಮಲಗಿದ್ದೇನೆ' ಎಂದೂ ಪ್ರಜ್ಞಾಪೂರ್ವಕ ವಾಗಿ ಅರಿಯುತ್ತಾನೆ.

**೩. ಸಮ್ಮಜ್ಜಾನಕಾರೋ:** ಕಾಯಾನುಪಸ್ಸನದಲ್ಲಿ ಇದು ಮೂರನೆ ಯದು. ಸಾಧಕನು ಹೋಗುವುದರಲ್ಲಿ, ಬರುವುದರಲ್ಲಿ, ಮುಂದೆ ನೋಡುವುದರಲ್ಲಿ, ಬೇರೆಡೆ ನೋಡುವುದರಲ್ಲಿ ಎಚ್ಚರವನ್ನು ಅಭ್ಯಾಸ ಮಾಡುತ್ತಾನೆ. ಅಂಗಾಂಗಗಳನ್ನು ಚಾಚುವುದರಲ್ಲಿ, ಬಾಗಿಸು ವುದರಲ್ಲಿ, ಬಟ್ಟೆ ತೊಡುವುದರಲ್ಲಿ, ಊಟಮಾಡುವಾಗ, ಎಚ್ಚರದಲ್ಲಿ, ನಿದ್ದೆಯಲ್ಲಿ, ಮಾತನಾಡುವುದರಲ್ಲಿ, ಸುಮ್ಮನಿರುವುದರಲ್ಲಿ – ಹೀಗೆ ಎಲ್ಲ ಕಾರ್ಯಗಳಲ್ಲೂ ಎಚ್ಚರವನ್ನು ಅಭ್ಯಾಸ ಮಾಡುತ್ತಾನೆ.

**೪. ಪಟಿಕೂಲಮನಸಿಕಾರೋ (ಪ್ರತಿಕೂಲಗಳ ಬಗ್ಗೆ ಎಚ್ಚರದ ಅರಿವು) :** ಕಾಯಾನುಪಸ್ಸನದಲ್ಲಿ ಪಟಿಕೂಲಮನಸಿಕಾರೋ ಎಂಬುದು ನಾಲ್ಕನೆಯದು. ಸಾಧಕನು, ತನ್ನ ಶರೀರವು ಅಡಿ ಯಿಂದ ಮುಡಿಯವರೆಗೆ, ಮುಡಿಯಿಂದ ಕೆಳಗೆ, ಚರ್ಮದಿಂದ ಸುತ್ತುವರಿದ ನಾನಾ ಪ್ರಕಾರದ ಹೇಸಿಗೆಯಿಂದ ತುಂಬಿರುವುದನ್ನು ಅವಲೋಕಿಸುತ್ತಾನೆ. ಯಾವ ರೀತಿ ಹಲವು ಭಾಗಗಳಿರುವ ಚೀಲ ದಲ್ಲಿ ನಾನಾ ವಿಧವಾದ ಧಾನ್ಯಗಳನ್ನು ತುಂಬಿಟ್ಟರೆ, ಒಬ್ಬ ಮನುಷ್ಯ ಇದು ಅಕ್ಕಿ, ಇದು ಹೆಸರುಕಾಳು, ಇದು ಉದ್ದಿನಕಾಳು, ಇದು ಎಳ್ಳು ಎಂಬುದಾಗಿ ಅರಿಯುತ್ತಾನೆಯೋ, ಹಾಗೆಯೇ ಸಾಧಕನು, ಈ ಶರೀರದಲ್ಲಿ ತಲೆಕೂದಲು, ಮೈಗೂದಲು, ಉಗುರುಗಳು, ಹಲ್ಲುಗಳು, ತೊಗಲು, ಮಾಂಸ, ಸ್ನಾಯುಗಳು, ಮೂಳೆ, ಮೂತ್ರಪಿಂಡ, ಹೃದಯ, ಯಕೃತ್ತು, ವಪೆ, ರಕ್ತ, ಬೆವರು, ಕೀವು, ಸಿಂಬಳ, ಕಣ್ಣೀರು, ಮೇದಸ್ಸು, ಎಂಜಲು, ಮೂತ್ರ ಮತ್ತು ಮಲ ಗಳಿವೆ ಎಂದು ಅರಿಯುತ್ತಾನೆ.

**೫. ಧಾತುಮನಸಿಕಾರೋ (ಧಾತುಗಳನ್ನು ಮನಸ್ಸಿಗೆ ತಂದು ಕೊಳ್ಳುವುದು):** ಕಾಯಾನುಪಸ್ಸನದಲ್ಲಿ ಧಾತುಮನಸಿಕಾರೋ ಎಂಬುದು ಐದನೆಯದು. ಹೇಗೆ ಒಂದು ಪ್ರಾಣಿಯನ್ನು ಕೊಲ್ಲುವ ಕಟುಕನು ಅದನ್ನು ಕೊಂದು, ಅದರ ಬೇರೆ ಬೇರೆ ಭಾಗಗಳನ್ನು ಬೇರ್ಪಡಿಸಿ, ಅವುಗಳನ್ನು ತನ್ನ ಅಂಗಡಿಯಲ್ಲಿ ಇಟ್ಟುಕೊಂಡು ಕುಳಿತಿರುತ್ತಾನೋ, ಹಾಗೆಯೇ ಸಾಧಕನು ಈ ಶರೀರದಲ್ಲಿರುವ ಪೃಥ್ವೀಧಾತುವನ್ನು, ಆಪೋಧಾತುವನ್ನು, ತೇಜೋಧಾತುವನ್ನು ಮತ್ತು ವಾಯುಧಾತುವನ್ನು ಬೇರ್ಪಡಿಸಿ ಅರಿತುಕೊಳ್ಳುತ್ತಾನೆ.

**೬. ಅಸುಭಾನುಸ್ಸತಿ (ಅಶುಭಾನುಸ್ಮೃತಿ):** ಕಾಯಾನುಪಸ್ಸನದಲ್ಲಿ ಅಸುಭಾನುಸ್ಸತಿಯು ಆರನೆಯದು. ಸಾಧಕನು ಶ್ಮಶಾನದಲ್ಲಿ ಎರಡು ಮೂರು ದಿನಗಳ ಹಿಂದೆ ಸತ್ತು ಬಿದ್ದಿರುವ ಊದಿಕೊಂಡಿರುವ, ನೀಲಿಗಟ್ಟಿರುವ, ಕೊಳೆತಿರುವ ಶರೀರವನ್ನು ನೋಡುತ್ತಾನೆ. ಅವನು ತನ್ನ ಶರೀರದ ಜೊತೆ ಅದನ್ನು ಹೀಗೆ ಹೋಲಿಸಿಕೊಳ್ಳುತ್ತಾನೆ: "ಈ ಕಾಯವೂ ಕೂಡ ಇದೇ ಸ್ವಭಾವದ್ದಾಗಿದೆ. ಇದು ಅದರ ಹಾಗೆಯೇ ಆಗುತ್ತದೆ. ಹೀಗಾಗುವುದನ್ನು ಅದು ತಡೆಯ ಲಾಗುವುದಿಲ್ಲ." ಸಾಧಕನು ಶ್ಮಶಾನದಲ್ಲಿ ನಾಯಿ, ಹದ್ದು, ಕಾಗೆ, ನರಿಗಳೇ ಮೊದಲಾದ ಪ್ರಾಣಿಗಳಿಂದ ಕಿತ್ತು ತಿನ್ನಲ್ಪಡುವ ಶವವನ್ನು ನೋಡುತ್ತಾ ಅವನ್ನು ತನ್ನ ಶರೀರಕ್ಕೆ ಹೀಗೆ ಹೋಲಿಸಿಕೊಳ್ಳುತ್ತಾನೆ: "ಈ ಕಾಯವೂ ಕೂಡ ಇದೇ ಸ್ವಭಾವದ್ದಾಗಿದೆ, ಅದರ ಹಾಗೆಯೇ ಆಗುತ್ತದೆ. ಹೀಗಾಗುವುದನ್ನು ಅದು ತಡೆಯಲಾಗುವುದಿಲ್ಲ." ಸಾಧಕನು ಶ್ಮಶಾನದಲ್ಲಿ ಬಿದ್ದಿರುವ ಸ್ನಾಯು-ಮಾಂಸಗಳಿಗೆ ಅಂಟಿಕೊಂಡಿರುವ ಅಸ್ಥಿಪಂಜರವನ್ನು ನೋಡಿ ಅದನ್ನು ತನ್ನ ಶರೀರಕ್ಕೆ ಹೀಗೆ ಹೋಲಿಸಿಕೊಳ್ಳುತ್ತಾನೆ: "ಈ ಕಾಯವೂ ಕೂಡ ಇದೇ ಸ್ವಭಾವದ್ದಾಗಿದೆ, ಅದರ ಹಾಗೆಯೇ ಆಗುತ್ತದೆ. ಹೀಗಾಗುವುದನ್ನು ಅದು ತಡೆಯಲಾಗುವುದಿಲ್ಲ." ಹಾಗೆಯೇ ಸಾಧಕನು ಸವೆದುಹೋಗಿ ಪುಡಿಪುಡಿಯಾಗಿರುವ, ಅಲ್ಲಲ್ಲಿ ಚೆಲ್ಲಾಪಿಲ್ಲಿಯಾಗಿರುವ ಮೂಳೆಗಳನ್ನು ನೋಡುತ್ತ, "ಈ ಕಾಯವೂ ಕೂಡ ಇದೇ ಸ್ವಭಾವದ್ದಾಗಿದೆ, ಅದರ ಹಾಗೆಯೇ ಆಗುತ್ತದೆ. ಹೀಗಾಗುವುದನ್ನು ಅದು ತಡೆಯಲಾಗುವುದಿಲ್ಲ" ಎಂದು ಅರಿಯುತ್ತಾನೆ. ಹೀಗೆ ಆತನು ಕಾಯದಲ್ಲಿ ಕಾಯಾನುಪಸ್ಸಿಯಾಗಿ, ಕಾಯದಲ್ಲಿರುವ ಉತ್ಪತ್ತಿಯ ಧರ್ಮವನ್ನು, ನಾಶದ ಧರ್ಮವನ್ನು ಎಚ್ಚರದಿಂದ ಅರಿಯುತ್ತಾನೆ. ಹೀಗೆ ಆತನು ಲೋಕದಲ್ಲಿ ಯಾವುದೇ ಹಂಗಿಲ್ಲದೆ, ಯಾವುದಕ್ಕೂ ಅಂಟಿಕೊಳ್ಳದೆ ಇರುತ್ತಾನೆ.

## ವೇದನಾನುಪಸ್ಸನ ವಿಧಿ

ಸಾಧಕನು ಸುಖದ ವೇದನೆಯನ್ನು ಅನುಭವಿಸುವಾಗ 'ಸುಖದ ವೇದನೆಯನ್ನು ಅನುಭವಿಸುತ್ತಿದ್ದೇನೆ' ಎಂದು ಅರಿಯುತ್ತಾನೆ. ದುಃಖದ ವೇದನೆಯನ್ನು ಅನುಭವಿಸುವಾಗ 'ದುಃಖದ ವೇದನೆಯನ್ನು ಅನುಭವಿಸುತ್ತಿದ್ದೇನೆ' ಎಂದು ಅರಿಯುತ್ತಾನೆ. ಸುಖವಲ್ಲದ, ದುಃಖವಲ್ಲದ ವೇದನೆಯನ್ನು ಅನುಭವಿಸುವಾಗ 'ನಾನು ಸುಖವಿಲ್ಲದ, ದುಃಖವಿಲ್ಲದ ವೇದನೆಯನ್ನು ಅನುಭವಿಸುತ್ತಿದ್ದೇನೆ' ಎಂದು ಅರಿಯುತ್ತಾನೆ. ಪ್ರಲೋಭನೆಯಿರುವ ಸುಖದ ವೇದನೆಯನ್ನು ಅನುಭವಿಸುತ್ತಿರುವಾಗ 'ನಾನು ಪ್ರಲೋಭನೆಯಿರುವ ಸುಖದ ವೇದನೆಯನ್ನು ಅನುಭವಿಸುತ್ತಿದ್ದೇನೆ' ಎಂದೂ, ಪ್ರಲೋಭನೆಯಿರುವ ದುಃಖದ ವೇದನೆಯನ್ನು ಅನುಭವಿಸುವಾಗ 'ನಾನು ಪ್ರಲೋಭನೆಯಿರುವ ದುಃಖದ ವೇದನೆಯನ್ನು ಅನುಭವಿಸುತ್ತಿದ್ದೇನೆ' ಎಂದೂ ಸಾಧಕನು ಎಚ್ಚರಿಕೆಯಿಂದ ಅರಿಯುತ್ತಾನೆ. ಹೀಗೆ ಆತ ಮನಸ್ಸಿನ ವೇದನೆಗಳ ಉತ್ಪತ್ತಿ ಹಾಗೂ ನಾಶದ ಧರ್ಮಗಳನ್ನು ಅರಿತವನಾಗುತ್ತಾನೆ. ಹೀಗೆ ಕೊನೆಗೆ 'ಇರುವುದು ವೇದನೆಯಷ್ಟೆ' ಎಂದು ಆತ ಅರಿಯುತ್ತಾನೆ. ಅಲ್ಲದೆ, ಈ ಸತಿ ಅಥವಾ ಎಚ್ಚರವು ವಿಪಸ್ಸನಾ (ವಿಪಶ್ಯನಾ) ಜ್ಞಾನಕ್ಕಾಗಿ ಹಾಗೂ ದೃಢವಾದ ಎಚ್ಚರದ ಸ್ಥಿತಿಯಲ್ಲಿರುವುದಕ್ಕಾಗಿ ಮಾತ್ರವೇ ಎಂದು ಅದರ ಪ್ರಯೋಜನವನ್ನು ಅರಿಯುತ್ತಾನೆ. 'ವಿಪಸ್ಸನಾ' ಎಂದರೆ ಯಾವುದರ ಮೇಲೆ ಧ್ಯಾನವನ್ನು ಮಾಡುತ್ತೇವೆಯೋ ಅದರ ಬಗ್ಗೆ ಅಂತರ್ದೃಷ್ಟಿಯನ್ನು ಪಡೆಯುವುದು. (ಬೌದ್ಧಧರ್ಮದ ಧ್ಯಾನದಲ್ಲಿ **ಸಮತಾಧ್ಯಾನ** ಹಾಗೂ **ವಿಪಸ್ಸನಾಧ್ಯಾನ** ಎಂದು ಎರಡು ಬಗೆ. ಸಮತಾ ಎಂದರೆ, ಏಕಾಗ್ರತೆ. ವಿಪಸ್ಸನಾ ಎಂದರೆ ದೇಹದ ಹಾಗೂ ಮನಸ್ಸಿನ ಪ್ರತಿಯೊಂದು ಚಲನವಲನಗಳ ಅನುಭವಾತ್ಮಕ ಅಂತರ್ದೃಷ್ಟಿಯನ್ನು ಹೊಂದುವುದು. ಈ ವಿಪಸ್ಸನಾವನ್ನು ಕೇವಲ ಮನಸ್ಸಿನ ತೀಕ್ಷ್ಣ ಏಕಾಗ್ರತೆಯನ್ನು ಗಳಿಸುವುದರಲ್ಲಿ ಮಾತ್ರ ಉಪಯೋಗಿಸುವದಲ್ಲ. ಎಲ್ಲ ಬಗೆಯ ಮಾನಸಿಕ ಹಾಗೂ ಶಾರೀರಿಕ ದುಃಖಗಳಿಂದ ಮುಕ್ತರಾಗುವುದಕ್ಕಾಗಿ ಇದನ್ನು ಅನುಷ್ಠಾನ ಮಾಡಬೇಕು.) ಹೀಗಾದಾಗ ಸಾಧಕನು ಯಾವುದಕ್ಕೂ ಅಂಟಿಕೊಳ್ಳುವುದಿಲ್ಲ. ಎಲ್ಲರಿಂದಲೂ ಮುಕ್ತನಾಗುತ್ತಾನೆ.

## ಚಿತ್ತಾನುಪಸ್ಸನಾದ ವಿಧಿ

ಸಾಧಕನಾದವನು ರಾಗವಿರುವ ಚಿತ್ತದಲ್ಲಿ 'ಇದು ರಾಗವಿರುವ ಚಿತ್ತ' ವೆಂದು ಅರಿಯುತ್ತಾನೆ. ರಾಗವಿಲ್ಲದ ಚಿತ್ತದಲ್ಲಿ 'ಇದು ರಾಗವಿಲ್ಲದ ಚಿತ್ತ' ಎಂದು ಅರಿಯುತ್ತಾನೆ. ದ್ವೇಷವಿರುವ ಚಿತ್ತದಲ್ಲಿ 'ಇದು ದ್ವೇಷವಿರುವ ಚಿತ್ತ' ವೆಂದು ಅರಿಯುತ್ತಾನೆ. ದ್ವೇಷವಿಲ್ಲದ ಚಿತ್ತದಲ್ಲಿ 'ಇದು ದ್ವೇಷವಿಲ್ಲದ ಚಿತ್ತ'ವೆಂದು ಅರಿಯುತ್ತಾನೆ. ಮೋಹವಿರುವ ಚಿತ್ತವನ್ನು 'ಇದು ಮೋಹವಿರುವ ಚಿತ್ತ' ವೆಂದು ಅರಿಯುತ್ತಾನೆ. ಹಾಗೆಯೆ ಮೋಹವಿಲ್ಲದ ಚಿತ್ತವನ್ನು 'ಇದು ಮೋಹವಿಲ್ಲದ ಚಿತ್ತ' ವೆಂದು ಅರಿಯುತ್ತಾನೆ. ಹತಾಶೆಗೊಂಡ ಚಿತ್ತವನ್ನು 'ಇದು ಹತಾಶೆಗೊಂಡಿರುವ ಚಿತ್ತ'ವೆಂದು ಅರಿಯುತ್ತಾನೆ. (ಧ್ಯಾನದಿಂದ) ಹಿಗ್ಗಿದ ಚಿತ್ತವನ್ನು 'ಇದು ಹಿಗ್ಗಿದ ಚಿತ್ತ'ವೆಂದು ಅರಿಯುತ್ತಾನೆ. (ಧ್ಯಾನದಿಂದ) ಹಿಗ್ಗದ ಚಿತ್ತವನ್ನು 'ಇದು ಹಿಗ್ಗದ ಚಿತ್ತ' ವೆಂದೂ ಅರಿಯುತ್ತಾನೆ. ಸಮಾಧಿಯನ್ನು ಹೊಂದಿರುವ ಚಿತ್ತವನ್ನು 'ಇದು ಸಮಾಧಿಯನ್ನು ಹೊಂದಿರುವ ಚಿತ್ತ' ಎಂದೂ, ಸಮಾಧಿಯನ್ನು ಹೊಂದದೆ ಇರುವ ಚಿತ್ತವನ್ನು 'ಇದು ಸಮಾಧಿಯನ್ನು ಹೊಂದದೆ ಇರುವ ಚಿತ್ತ'ವೆಂದು ಅರಿಯುತ್ತಾನೆ. ವಿಮುಕ್ತವಾದ ಚಿತ್ತವನ್ನು 'ಇದು ವಿಮುಕ್ತವಾದ ಚಿತ್ತ'ವೆಂದೂ, ವಿಮುಕ್ತವಾಗದ ಚಿತ್ತವನ್ನು 'ಇದು ವಿಮುಕ್ತವಾಗದ ಚಿತ್ತ'ವೆಂದೂ ಅರಿಯುತ್ತಾನೆ. ಹೀಗೆ ಚಿತ್ತದಲ್ಲಿ ಉತ್ಪತ್ತಿ ಹಾಗೂ ನಾಶಧರ್ಮಗಳನ್ನು ವಿಪಸ್ಸನಾ ಮೂಲಕ ಧ್ಯಾನಿಸುತ್ತ ಮನಸ್ಸಿನಲ್ಲೇ ವಿಹರಿಸುತ್ತಾನೆ. ಹೀಗೆ ಕೊನೆಗೆ 'ಇರುವುದು ಕೇವಲ ಚಿತ್ತವೇ' ಎಂದು ಆತ ಅರಿಯುತ್ತಾನೆ. ಅಲ್ಲದೆ, ಈ ಸತಿ ಅಥವಾ ಎಚ್ಚರವು ವಿಪಸ್ಸನಾ (ವಿಪಶ್ಯನಾ) ಜ್ಞಾನಕ್ಕಾಗಿ ಹಾಗೂ ದೃಢವಾದ ಎಚ್ಚರದ ಸ್ಥಿತಿಯಲ್ಲಿರುವುದಕ್ಕಾಗಿ ಮಾತ್ರವೇ ಎಂದು ಅದರ ಪ್ರಯೋಜನವನ್ನು ಅರಿಯುತ್ತಾನೆ.

## ಧಮ್ಮಾನುಪಸ್ಸನಾದ ವಿಧಿ

ಸಾಧಕನು ಐದು ತಡೆಗಳಲ್ಲಿ ಧಮ್ಮಾನುಪಸ್ಸಿಯಾಗುತ್ತಾನೆ. **ಕಾಮ, ಹಗೆತನ, ಆಲಸ್ಯ–ಜಡತೆ, ಚಂಚಲತೆ ಮತ್ತು ಸಂಶಯಗಳೇ ಆ ಐದು ತಡೆಗಳು**. ತನ್ನಲ್ಲಿ ಕಾಮವಿರುವಾಗ 'ನನ್ನೊಳಗೆ ಕಾಮವಿದೆ' ಎಂದು ಅರಿಯುತ್ತಾನೆ. ತನ್ನಲ್ಲಿ ಕಾಮವಿಲ್ಲದಿರುವಾಗ 'ನನ್ನಲ್ಲಿ ಕಾಮವಿಲ್ಲ'ವೆಂದು ಅರಿಯುತ್ತಾನೆ. ಉತ್ಪನ್ನವಾಗದ ಕಾಮವು ಹೇಗೆ ಉತ್ಪನ್ನವಾಗುವುದೋ ಅದನ್ನು ಅರಿಯುತ್ತಾನೆ. ಹಾಗೆಯೇ ನಾಶವಾದ ಕಾಮವು ಹೇಗೆ ಉತ್ಪನ್ನವಾಗುವುದಿಲ್ಲವೋ ಅದನ್ನೂ ಅರಿಯುತ್ತಾನೆ. ತನ್ನಲ್ಲಿ ಹಗೆತನವಿರುವಾಗ 'ನನ್ನೊಳಗೆ ಹಗೆತನವಿದೆ' ಎಂದು ಅರಿಯುತ್ತಾನೆ. ತನ್ನಲ್ಲಿ ಹಗೆತನವಿಲ್ಲದಿರುವಾಗ 'ನನ್ನಲ್ಲಿ ಹಗೆತನವಿಲ್ಲ' ಎಂದು ಅರಿಯುತ್ತಾನೆ. ಉತ್ಪನ್ನವಾಗದ ಹಗೆತನವು ಹೇಗೆ ಉತ್ಪನ್ನವಾಗುವುದೋ ಅದನ್ನು ಅರಿಯುತ್ತಾನೆ. ಹಾಗೆಯೇ ನಾಶವಾದ ಹಗೆತನವು ಹೇಗೆ ಉತ್ಪನ್ನವಾಗುವುದಿಲ್ಲವೋ ಅದನ್ನೂ ಅರಿಯುತ್ತಾನೆ. ತನ್ನಲ್ಲಿ ಆಲಸ್ಯ ಜಡತೆಗಳಿರುವಾಗ 'ನನ್ನಲ್ಲಿ ಆಲಸ್ಯ ಜಡತೆಗಳಿವೆ'ಯೆಂದು ಅರಿಯುತ್ತಾನೆ. ಹಾಗೆಯೇ ತನ್ನಲ್ಲಿ ಆಲಸ್ಯ ಜಡತೆಗಳಿಲ್ಲದಿರುವಾಗ 'ನನ್ನಲ್ಲಿ ಆಲಸ್ಯ ಜಡತೆಗಳಿಲ್ಲ'ವೆಂದೂ ಅರಿಯುತ್ತಾನೆ. ತನ್ನಲ್ಲಿ ಉತ್ಪನ್ನವಾಗುವ ಆಲಸ್ಯ ಜಡತೆಗಳ ಬಗ್ಗೆ ಹಾಗೂ ಅವುಗಳ ನಾಶವನ್ನೂ ಅರಿಯುತ್ತಾನೆ. ತನ್ನಲ್ಲಿ ಸಂಶಯವಿರುವಾಗ 'ನನ್ನಲ್ಲಿ ಸಂಶಯವಿದೆ' ಎಂದು ಅರಿಯುತ್ತಾನೆ. ತನ್ನಲ್ಲಿ ಸಂಶಯವಿಲ್ಲದಾಗ 'ನನ್ನಲ್ಲಿ ಸಂಶಯವಿಲ್ಲ' ಎಂದೂ ಅರಿಯುತ್ತಾನೆ. ಸಂಶಯದ ಉತ್ಪತ್ತಿ ಹಾಗೂ ನಾಶಗಳೆರಡನ್ನೂ ತನ್ನಲ್ಲಿ ಅರಿಯುತ್ತಾನೆ. ಹೀಗೆ ಸಾಧಕನು ಐದು ತಡೆಗಳಲ್ಲಿ ಧಮ್ಮಾನುಪಸ್ಸಿಯಾಗಿ ನಿಲ್ಲುತ್ತಾನೆ.

ಸಾಧಕನು ಐದು ಉಪಾದಾನ ಸ್ಕಂದಗಳಲ್ಲಿ ಧಮ್ಮಾನುಪಸ್ಸಿಯಾಗುತ್ತಾನೆ. **ರೂಪಸ್ಕಂದ, ವೇದನಾಸ್ಕಂದ, ಸಂಜ್ಞಾಸ್ಕಂದ, ಸಂಸ್ಕಾರಸ್ಕಂದ** ಮತ್ತು **ವಿಜ್ಞಾನಸ್ಕಂದ**ಗಳೇ ಆ ಐದು ಸ್ಕಂದಗಳು. ರೂಪಸ್ಕಂದವೆಂದರೆ ಎಲ್ಲ ಭೌತಿಕ ವಸ್ತುಗಳ ಮೊತ್ತ. ವೇದನಾಸ್ಕಂದವೆಂದರೆ ಎಲ್ಲ ಅನಿಸಿಕೆಗಳ ಮೊತ್ತ. ಸಂಜ್ಞಾಸ್ಕಂದವೆಂದರೆ ಗುರುತಿಸುವಿಕೆಗಳ ಒಟ್ಟು ಮೊತ್ತ. ಸಂಸ್ಕಾರಸ್ಕಂದವೆಂದರೆ ಮನೋವ್ಯಾಪಾರಗಳ ಒಟ್ಟು ಮೊತ್ತ. ವಿಜ್ಞಾನಸ್ಕಂದವೆಂದರೆ ಪ್ರಜ್ಞೆಯ ಮೊತ್ತ. ಈ ಐದು ಸ್ಕಂದಗಳಿಗೆ ಪರಸ್ಪರ ಸಂಬಂಧದಿಂದ ಅಂಟಿಕೊಂಡಿರುವುದಷ್ಟೆ ಉಪಾದಾನಸ್ಕಂದವೆನಿಸಿಕೊಳ್ಳುತ್ತದೆ. ಸಾಧಕನು 'ಇದು ರೂಪ, ಇದು ರೂಪದ ಉತ್ಪತ್ತಿ, ಇದು ರೂಪದ ಅಸ್ತಮಾನ; ಇದು ವೇದನಾ, ಇದು ವೇದನೆಯ ಉತ್ಪತ್ತಿ, ಇದು ವೇದನೆಯ ಅಸ್ತಮಾನ; ಇದು ಸಂಜ್ಞಾ, ಇದು ಸಂಜ್ಞೆಯ ಉತ್ಪತ್ತಿ, ಇದು ಸಂಜ್ಞೆಯ ಅಸ್ತಮಾನ; ಇದು ಸಂಸ್ಕಾರ, ಇದು ಸಂಸ್ಕಾರದ ಉತ್ಪತ್ತಿ, ಇದು ಸಂಸ್ಕಾರದ ಅಸ್ತಮಾನ, ಇದು ವಿಜ್ಞಾನ, ಇದು ವಿಜ್ಞಾನದ ಉತ್ಪತ್ತಿ, ಇದು ವಿಜ್ಞಾನದ ಅಸ್ತಮಾನ' ಎಂದು ಐದು ಉಪಾದಾನ ಸ್ಕಂದಗಳನ್ನು ಅರಿಯುತ್ತಾನೆ.

ಸಾಧಕನು ಒಳಹೊರಗಿನ ಆರು ಆಯತನಗಳಲ್ಲಿ ಧಮ್ಮಾನುಪಸ್ಸಿಯಾಗುತ್ತಾನೆ. ಈ ಆರು ಆಯತನಗಳು ಹೀಗಿವೆ: ೧. ಸಾಧಕನು ಕಣ್ಣನ್ನು ಅರಿಯುತ್ತಾನೆ ಮತ್ತು ರೂಪವನ್ನು ಅರಿಯುತ್ತಾನೆ. ಅವೆರಡರ ಪರಸ್ಪರ ಅವಲಂಬನೆಯಿಂದ ಯಾವ ಸಂಕೋಲೆಯುಂಟಾಗುವುದೋ ಅದನ್ನು ಅರಿಯುತ್ತಾನೆ. ಅದರ ಉತ್ಪತ್ತಿ ಹೇಗಾಗುವುದೋ, ಉತ್ಪನ್ನವಾದ ಸಂಕೋಲೆಯು ಹೇಗೆ ನಾಶವಾಗುವುದೋ ಅದನ್ನೂ ಅರಿಯುತ್ತಾನೆ. ೨. ಹೀಗೆಯೇ ಸಾಧಕನು ಕಿವಿಯನ್ನು, ಶಬ್ದವನ್ನು, ಅವುಗಳ ಪರಸ್ಪರ ಅವಲಂಬನೆಯಿಂದ ಯಾವ ಸಂಕೋಲೆಯುಂಟಾಗುವುದೋ ಅದನ್ನೂ ಅರಿಯುತ್ತಾನೆ, ಅದರ ಉತ್ಪತ್ತಿ ಹಾಗೂ ನಾಶವನ್ನು ಅರಿಯುತ್ತಾನೆ. ೩. ಸಾಧಕನು ಘ್ರಾಣವನ್ನು, ಗಂಧವನ್ನು, ಅವುಗಳ ಪರಸ್ಪರ ಅವಲಂಬನೆಯಿಂದ ಯಾವ ಸಂಕೋಲೆಯುಂಟಾಗುವುದೋ ಅದನ್ನೂ ಅರಿಯುತ್ತಾನೆ. ೪. ಸಾಧಕನು ನಾಲಗೆಯನ್ನು ಅರಿಯುತ್ತಾನೆ ಮತ್ತು ರುಚಿಯನ್ನು ಅರಿಯುತ್ತಾನೆ. ಅವೆರಡರ ಪರಸ್ಪರ ಅವಲಂಬನೆಯಿಂದ ಯಾವ ಸಂಕೋಲೆಯುಂಟಾಗುವುದೋ ಅದನ್ನು ಅರಿಯುತ್ತಾನೆ. ಅದರ ಉತ್ಪತ್ತಿ ಹಾಗೂ ನಾಶವೆರಡನ್ನೂ ಅರಿಯುತ್ತಾನೆ. ೫. ಸಾಧಕನು ಕಾಯವನ್ನೂ, ಸ್ಪರ್ಶವನ್ನೂ, ಅವೆರಡರ ಪರಸ್ಪರ ಅವಲಂಬನೆಯಿಂದಾಗುವ ಸಂಕೋಲೆಯನ್ನೂ ಅರಿಯುತ್ತಾನೆ. ಅವುಗಳ ಉತ್ಪತ್ತಿ ಹಾಗೂ ನಾಶವೆರಡನ್ನೂ ಅರಿಯುತ್ತಾನೆ. ೬. ಕಡೆಯದಾಗಿ, ಅವನು ತನ್ನ ಮನಸ್ಸನ್ನು, ಅದರ ಧರ್ಮಗಳನ್ನು, ಹಾಗೆಯೇ ಅವೆರಡರ ಪರಸ್ಪರ ಅವಲಂಬನೆಯಿಂದ ಯಾವ ಸಂಕೋಲೆಯುಂಟಾಗುವುದೋ ಅದನ್ನು ಅರಿಯುತ್ತಾನೆ. ಅದರ ಉತ್ಪತ್ತಿ ಹಾಗೂ ನಾಶವೆರಡನ್ನೂ ಅರಿಯುತ್ತಾನೆ.

ಸಾಧಕನು ಏಳು ಬೋಜ್ಝಂಗ(ಬೋಧ್ಯಂಗ)ಗಳೆಂಬ ಧರ್ಮಗಳಲ್ಲಿ ಧಮ್ಮಾನುಪಸ್ಸಿಯಾಗುತ್ತಾನೆ. ಸಂಯುತ್ತನಿಕಾಯ ತ್ರಿಪಿಟಕ ಗ್ರಂಥದಲ್ಲಿ ಈ ಮಾತು ಬರುತ್ತದೆ. ಪಾಲಿ ಭಾಷೆಯಲ್ಲಿ ಶಿಷ್ಯನು ಬುದ್ಧನನ್ನು ಏನಿದು ಬೋಜ್ಝಂಗವೆಂದು ಪ್ರಶ್ನಿಸಿದಾಗ ಬುದ್ಧನು, **'ಬೋದಾಯ ಸಂವತ್ತಂತೀತಿ ಖೋ ಭಿಕ್ಖು, ತಸ್ಮಾ ಬೊಜ್ಝಂಗ ಇತಿ ಉಚ್ಚಂತಿ'** – ಅಂದರೆ, 'ಹೇ ಭಿಕ್ಷುವೆ, ಅವು ಸಂಬೋಧಿಯನ್ನು ತಂದುಕೊಡುತ್ತವೆ, ಆದ್ದರಿಂದ ಅವುಗಳನ್ನು ಬೋಧ್ಯಂಗವೆಂದು ಕರೆಯುತ್ತಾರೆ' ಎಂದುತ್ತರಿಸುತ್ತಾನೆ.

**ಸತಿ** (ಎಚ್ಚರ), **ಧಮ್ಮವಿಚಯ** (ಧರ್ಮವನ್ನು ಕುರಿತ ವಿಚಾರ), **ವಿರಿಯ** (ಪ್ರಯತ್ನ), **ಪೀತಿ** (ಆನಂದ), **ಪಸ್ಸದ್ಧಿ** (ಪ್ರಶಾಂತತೆ), **ಸಮಾಧಿ** (ಏಕಾಗ್ರತೆ) ಮತ್ತು **ಉಪೇಕ್ಖಾ** (ಸಮಚಿತ್ತತೆ) ಇವೇ ಆ ಏಳು ಬೋಧ್ಯಂಗಗಳು. ಸತಿಯನ್ನು ಈ ಹಿಂದೆ ಸತಿಪಟ್ಠಾನದಲ್ಲಿ ವಿವರಿಸಿಯಾಗಿದೆ. ಎಲ್ಲ ಸಜೀವ–ನಿರ್ಜೀವ, ಮಾನುಷ–ದೈವ ವ್ಯಕ್ತಿ–ವಸ್ತುಗಳು ಹೇಗಿವೆಯೋ ಹಾಗೆಯೋ ಅವುಗಳ ಧರ್ಮಗಳನ್ನು ಅರಿಯುವುದು. ಎಲ್ಲದರ ಕ್ಷಣಿಕತ್ವವನ್ನು ಅರಿತುಕೊಳ್ಳುವುದೇ ಧರ್ಮವಿಚಯದ ಉದ್ದೇಶ. ವಿರಿಯ ಅಥವಾ ವೀರ್ಯವೇ ಮೂರನೆಯ ಬೋಧ್ಯಂಗ. ಅಲಸಿಗನಿಗೆ ಆಧ್ಯಾತ್ಮಿಕ ಜೀವನ ಸಾಧ್ಯವಿಲ್ಲ. ಉತ್ಸಾಹದಿಂದ, ದೃಢ ನಿಶ್ಚಯದಿಂದ ಸತತ ಪ್ರಯತ್ನವನ್ನು ಮಾಡುತ್ತಲೇ ಇರಬೇಕು. ತೃಪ್ತಿಯೇ ಸುಖೀ ಮಾನವನ ಪರಿಚಯ. ಆಧ್ಯಾತ್ಮಿಕ ಜೀವನದಲ್ಲಿ ಇಳಿದು ಧ್ಯಾನಾಚರಣೆಯನ್ನು ಮಾಡಬೇಕೆಂದಿರುವ ಮನುಷ್ಯ ತನ್ನಲ್ಲೇ ಸಂತೋಷವನ್ನು ಕಾಣದೇ ಹೋದರೆ ಸಾಧನೆ ಸಾಧ್ಯವಾಗದು. ಆದ್ದರಿಂದ ಈ ಪೀತಿ ಅಥವಾ ಪ್ರೀತಿಯೆಂಬ ಬೋಧ್ಯಂಗವನ್ನು

ಬೆಳೆಸಿಕೊಳ್ಳಬೇಕು. ಪಸ್ಸದ್ಧಿ ಅಥವಾ ಪ್ರಶ್ರಂಭವೇ ಐದನೆಯ ಅಂಗ. ಇದು ಕಾಯ ಪಸ್ಸದ್ಧಿ ಹಾಗೂ ಚಿತ್ತ ಪಸ್ಸದ್ಧಿಯೆಂದು ಎರಡು ಬಗೆ. ಇಲ್ಲಿ ಕಾಯವೆಂದರೆ ದೇಹವಲ್ಲ. ನಮ್ಮ ಭಾವನೆಗಳ, ಸಂವೇದನೆಗಳ, ಮತ್ತು ಸಂಸ್ಕಾರದ ಶಾಂತಿಯೇ ಕಾಯಪಸ್ಸದ್ಧಿ. ನಮ್ಮ ವಿಜ್ಞಾನ ಅಥವಾ ಮನಸ್ಸಿನ ಅವಸ್ಥೆಯ ಶಾಂತಿಯೇ ಚಿತ್ತ ಪಸ್ಸದ್ಧಿ. ಸಮಾಧಿಯೆಂದರೆ ಏಕಾಗ್ರತೆ. ಶಾಂತಗೊಂಡ ಮನಸ್ಸು ಏಕತ್ರಗೊಳ್ಳಲು ಸಿದ್ಧವಾಗಿರುತ್ತದೆ. ಮನಸ್ಸಿನ ಏಕಾಗ್ರತೆಯು ಐದು ನಿವರಣ ಅಥವಾ ತೊಂದರೆಗಳನ್ನು ಹೋಗಲಾಡಿಸುತ್ತದೆ. **ಕಾಮಚ್ಛಂದ** (ಮನಸ್ಸಿಗೆ ಬಂದಂತೆ ವರ್ತಿಸುವುದು), **ವ್ಯಾಪಾದ** (ದೌರ್ಮನಸ್ಯ), **ಥೀನಮಿದ್ದ** (ಸ್ತ್ಯಾನಮೇಧ), **ಉದ್ದಚ್ಚಕುಕ್ಕುಚ್ಚ** (ಔದ್ಧತ್ಯಕುತ್ಸಿತ), **ವಿಚಿಕಿತ್ತಾ** (ವಿಚಿಕಿತ್ಸಾ) ಗಳೇ ಆ ಐದು ತೊಂದರೆಗಳು. ಕಾಮಚ್ಛಂದವೆಂದರೆ ವಿಷಯವಸ್ತುಗಳನ್ನು ಹೊಂದುವಲ್ಲಿ ಇರುವ ಉತ್ಕಟ ಬಯಕೆ. ವ್ಯಾಪಾದವೆಂದರೆ ತನಗೆ ಅನಿಷ್ಟವಾದುದರಲ್ಲಿ ದ್ವೇಷ ಮನೋಭಾವ. ಸ್ತ್ಯಾನವೆಂದರೆ ಮನಸ್ಸಿನ ಆಲಸ್ಯ. ಮೇಧವೆಂದರೆ ಮನಸ್ಸಿನ ಹಟಮಾರಿ ಅವಸ್ಥೆ. ಔದ್ಧತ್ಯವೆಂದರೆ ಮನಸ್ಸಿನ ಕ್ಷುಬ್ಧತೆ, ಕುತ್ಸಿತವೆಂದರೆ ಮನಸ್ಸು ಯಾವುದೋ ಚಿಂತೆಯಲ್ಲಿ ಮುಳುಗಿರುವಿಕೆ. ವಿಚಿಕಿತ್ಸಾವೆಂದರೆ ಸಂಶಯ. ಇವೆಲ್ಲವೂ ಮನಸ್ಸನ್ನು ಶುದ್ಧಿಗೊಳಿಸಿ ವಿಪಶ್ಯನಾವನ್ನು ಸಾಧಿಸಲು ಇರತಕ್ಕ ಅಡೆತಡೆಗಳು. ಉಪೇಕ್ಖಾ (ಉಪೇಕ್ಷಾ) ಎಂದರೆ ಸಮಚಿತ್ತತೆ. ಇದೇ ಬೋಧಿಯ ಏಳನೆಯ ಅಂಗ. ಶಾಂತ ಏಕಾಗ್ರ ಮನಸ್ಸಿನ ಪರಿಣಾಮವಾಗಿ ಎಲ್ಲ ಸ್ಥಿತಿಗಳಲ್ಲಿಯೂ ಮನಸ್ಸಿನ ಸಮಸ್ಥಿತಿಯನ್ನು ಕಾಯ್ದುಕೊಳ್ಳುವುದು ಸಾಧ್ಯವಾಗುತ್ತದೆ. ಈ ಬೋಧ್ಯಂಗಗಳು ಅದೆಷ್ಟು ಶಕ್ತಿಶಾಲಿಗಳೆಂದರೆ, ಒಮ್ಮೆ ಬುದ್ಧನು ಕಾಯಿಲೆ ಬಿದ್ದಿರುವಾಗ ಮಹಾಚುಂದನೆಂಬ ಶಿಷ್ಯನು ಈ ಬೋಧ್ಯಂಗಗಳನ್ನು ಅವನ ಮುಂದೆ ಪಠಿಸಿದಾಗ ಬುದ್ಧನ ಕಾಯಿಲೆ ಗುಣವಾಯಿತಂತೆ! (ನೋಡಿ: **ಸಂಯುತ್ತ ನಿಕಾಯ**).

ನಾಲ್ಕು ಆರ್ಯಸತ್ಯಗಳಲ್ಲಿ ಸಾಧಕನು ಧಮ್ಮಾನುಪಸ್ಸಿಯಾಗುತ್ತಾನೆ. ಸಾಧಕನು 'ಇದು ದುಃಖ', 'ಇದು ದುಃಖದ ಕಾರಣ', 'ಇದು ದುಃಖದ ನಿರೋಧ', 'ಇದು ದುಃಖನಿರೋಧಕ್ಕೆ ಒಯ್ಯುವ ಮಾರ್ಗ' ಎಂದು ಅವುಗಳನ್ನು ಯಥಾವತ್ತಾಗಿ ಅರಿಯುತ್ತಾನೆ.

ಬುದ್ಧನು ಈ ವಿಧಾನಗಳನ್ನು ಬೋಧಿಸುತ್ತ ಹೇಳುತ್ತಾನೆ: "ಹೇ ಭಿಕ್ಷುಗಳೇ, ಯಾರು ಈ ನಾಲ್ಕು ಎಚ್ಚರದ ನೆಲೆಗಳನ್ನು ಹೀಗೆ ಏಳು ವರ್ಷಗಳ ಕಾಲ ಅಭ್ಯಾಸ ಮಾಡುತ್ತಾರೋ ಅವರು ಎರಡು ಫಲಗಳಲ್ಲಿ ಅಂದರೆ, ಒಂದೋ ಲೋಕೋತ್ತರವಾದ ಜ್ಞಾನಲಾಭ ಅಥವಾ (ಇನ್ನೂ ವಾಸನೆ ಉಳಿದಿದ್ದರೆ) ಅನಾಗಾಮಿತ್ವ ಲಾಭ – ಇವುಗಳಲ್ಲಿ ಒಂದನ್ನು ಹೊಂದುತ್ತಾರೆ. ಅನಾಗಾಮಿತ್ವವೆಂದರೆ, ಈ ಕರ್ಮಲೋಕಕ್ಕೆ ಬರದೆ, ಶುದ್ಧಾವಾಸವೆಂಬ ಅಲೌಕಿಕ ಸ್ಥಿತಿಯಲ್ಲಿ ತಾನೇ ಹುಟ್ಟಿ ಅರಹಂತನಾಗುವುದು. ಪುನಃ ಬುದ್ಧನು ಆ ಸಮಯದ ಮಿತಿಯನ್ನು ಆರು ವರ್ಷ, ಮೂರು ವರ್ಷ, ಒಂದು ವರ್ಷಗಳಿಗೆ ಇಳಿಸುತ್ತ ಕೊನೆಯಲ್ಲಿ ಘೋಷಿಸುತ್ತಾನೆ: "ಒಂದು ವಾರದ ಕಾಲ ಯಾರು ಈ ನಾಲ್ಕು ಎಚ್ಚರದ ನೆಲೆಗಳನ್ನು ಅಭ್ಯಾಸ ಮಾಡುವರೋ ಅವರು ಮೇಲಿನ ಎರಡು ಫಲಗಳಲ್ಲಿ ಒಂದನ್ನು (ಜ್ಞಾನಲಾಭ ಅಥವಾ ಅನಾಗಮಿತ್ವ ಲಾಭ) ಅವರ ಯೋಗ್ಯತೆಗೆ ತಕ್ಕಂತೆ ಪಡೆಯುತ್ತಾರೆ" ಎಂದು.

ಬುದ್ಧನ ಉಪದೇಶಗಳಲ್ಲಿ ಕ್ಲಿಷ್ಟ ತತ್ತ್ವಶಾಸ್ತ್ರದ ವಿಚಾರಗಳಿಗೆ, ಖಂಡನ–ಮಂಡನಗಳಿಗೆ ಸ್ಥಾನವಿಲ್ಲ. ಅವನ ಉಪದೇಶಗಳು ಪ್ರಾಯೋಗಿಕವಾಗಿದ್ದು, ದುಃಖದ ಆತ್ಯಂತಿಕ ಉಚ್ಛೇದವನ್ನು ಮಾಡಲು ಎಷ್ಟು ಬೇಕೋ ಅಷ್ಟು ತತ್ತ್ವಗಳನ್ನು ಮಾತ್ರ ಒಳಗೊಂಡ ಸಮರ್ಥವಾದ, ಶಕ್ತಿಯುತವಾದ ಬೋಧನಾಶೈಲಿಯನ್ನು ಒಳಗೊಂಡಿವೆ. ಆತ್ಮನ ಇರುವಿಕೆ, ಇಲ್ಲದಿರುವಿಕೆಯ ಬಗ್ಗೆ ವಚ್ಛಗೋತ್ತನೆಂಬ ಪರಿವ್ರಾಜಕ ಪ್ರಶ್ನಿಸಿದಾಗ ಬುದ್ಧನ ಉತ್ತರ ಮೌನವೇ ಆಗಿತ್ತು. ಏಕೆಂದರೆ, ಅದರ ಕುರಿತಾಗಿ ಏನನ್ನು ತಿಳಿಸಲು ಪ್ರಯತ್ನಿಸಿದರೂ ಪೂರ್ವಾಗ್ರಹ ಪೀಡಿತ ಬುದ್ಧಿಯು ಅದನ್ನು ತನಗೆ ಬೇಕಾದಂತೆ ಅರ್ಥ ಮಾಡಿಕೊಳ್ಳುತ್ತದೆ ಎಂಬ ಒಳನೋಟ ಬುದ್ಧನಿಗಿತ್ತು. ಈ ವಿಚಾರದಲ್ಲಿ ಆತ ಆನಂದನಿಗೆ ಹೇಳುತ್ತಾನೆ, "ಹೇ ಆನಂದ, ಒಂದು ವೇಳೆ ಯಾರಿಗಾದರೂ ಒಂದು ಬಾಣ ತಾಗಿ ಆತ ಬಿದ್ದು ನರಳುತ್ತಿದ್ದರೆ, ಯಾರಾದರೂ ಆ ಬಾಣವು ಯಾವ ದಿಕ್ಕಿನಿಂದ ಬಂತು, ಅದನ್ನು ಯಾವ ಜಾತಿಯವನು ಪ್ರಯೋಗಿಸಿದನು ಮೊದಲಾದ ಅನರ್ಥಕ ಪ್ರಶ್ನೆಯನ್ನು ಕೇಳುವನೋ, ಅಥವಾ ಆ ವ್ಯಕ್ತಿಯ ದೇಹದಲ್ಲಿ ಹೊಕ್ಕಿರುವ ಬಾಣವನ್ನು ತೆಗೆದು ಚಿಕಿತ್ಸೆ ಮಾಡುವನೋ" ತಕ್ಷಣ ಅಗತ್ಯವಿರುವುದು ದುಃಖದ ಶಮನಕ್ಕೆ ಚಿಕಿತ್ಸೆ. ಅದನ್ನೇ ಬುದ್ಧ ದೇವನು ತನ್ನ ಧಮ್ಮ ಬೋಧನೆಯ ಮೂಲಕ ಜಗತ್ತಿಗೆ ನೀಡುತ್ತಾನೆ. ಅದು ನಮಗೆ ದೀಘನಿಕಾಯ, ಮಜ್ಝಿಮ ನಿಕಾಯ, ಸಂಯುತ್ತ ನಿಕಾಯ, ಅಂಗುತ್ತರ ನಿಕಾಯ ಹಾಗೂ ಖುದ್ದಕ ನಿಕಾಯಗಳೆಂಬ ಬೌದ್ಧ ಗ್ರಂಥಗಳಲ್ಲಿ ಸಿಗುತ್ತದೆ. ೩೦

## ಧ್ಯಾನವನ್ನು ಕುರಿತು ಬುದ್ಧನ ನುಡಿಗಳು

**ಐದು ಬಗೆಯ ಧ್ಯಾನಗಳಿವೆ:**

**ಮೊದಲನೆಯದು ಪ್ರೀತಿಯ ಧ್ಯಾನ. ಇದರಲ್ಲಿ ನಿಮ್ಮ ಹೃದಯದ ಹೊಂದಾಣಿಕೆ ಮಾಡಿಕೊಳ್ಳಬೇಕು. ಅದರಿಂದ ನೀವು ಎಲ್ಲರ ಸುಖ, ಸಂತೋಷಗಳನ್ನು ಬಯಸಬೇಕು; ನಿಮ್ಮ ಶತ್ರುಗಳ ಆನಂದವನ್ನು ನೀವು ಬಯಸಬೇಕು.**

**ಎರಡನೆಯದು ಅನುಕಂಪದ ಧ್ಯಾನ. ಸಂಕಟದಲ್ಲಿರುವ ಎಲ್ಲ ಜೀವಿಗಳನ್ನು ಕುರಿತು ನೀವು ಚಿಂತಿಸಬೇಕು; ಅವರ ದುಃಖವನ್ನು ನೀವು ಸ್ಪಷ್ಟವಾಗಿ ಮನಸ್ಸಿನಲ್ಲಿ ಮೂಡಿಸಿಕೊಳ್ಳಬೇಕು. ಅದ–ರಿಂದ ನಿಮ್ಮ ಆತ್ಮದಲ್ಲಿ ಅವರಿಗಾಗಿ ಆಳವಾದ ಅನುಕಂಪ ಮೇಲೇಳುವಂತಾಗಬೇಕು.**

**ಮೂರನೆಯದು ಆನಂದದ ಧ್ಯಾನ. ಇಲ್ಲಿ ನೀವು ಇತರರ ಸಮೃದ್ಧಿಯನ್ನು ಕುರಿತು ಚಿಂತಿಸಬೇಕು. ಇತರರ ಸಂತೋಷದಲ್ಲಿ ನೀವು ಸಂತೋಷವನ್ನು ಕಾಣಬೇಕು.**

**ನಾಲ್ಕನೆಯದು ಅಶುಚಿಯ ಧ್ಯಾನ. ಕೆಡುಕಿನ, ಭ್ರಷ್ಟಜೀವನದ ಕೆಟ್ಟ ಪರಿಣಾಮಗಳನ್ನು ಕುರಿತು ನೀವು ಚಿಂತಿಸಬೇಕು. ಒಂದು ಕ್ಷಣಜ ಸುಖ ಎಷ್ಟೊಂದು ಕ್ಷುಲ್ಲಕ; ಆದರೆ ಅದರ ಪರಿಣಾಮಗಳು ಎಷ್ಟೊಂದು ಘೋರ!**

**ಐದನೆಯದು ಶಾಂತಿಯ ಧ್ಯಾನ. ಇಲ್ಲಿ ನೀವು ಪ್ರೀತಿ–ದ್ವೇಷ, ಸರ್ವಾಧಿಕಾರ–ಶೋಷಣೆ, ಬಡತನ–ಶ್ರೀಮಂತಿಕೆಗಳನ್ನು ಮೀರಿಹೋಗಿ ಉನ್ನತಭಾವದಲ್ಲಿರುತ್ತೀರಿ. ನಿಮ್ಮ ವಿಧಿಯನ್ನು ನೀವು ನಿಷ್ಪಕ್ಷಪಾತ ಶಾಂತಭಾವದಿಂದ, ಪರಿಪೂರ್ಣ ಶಾಂತಿಯಿಂದ ಪರಿಗಣಿಸುವಿರಿ.**

*– 'ಬುದ್ಧ ಸೂಕ್ತಿ'ಯಿಂದ (ಪು.38)*

# ಬುದ್ಧ ಹಾಗೂ ಅವನ ಸಾಧನ ಮಾರ್ಗ

ಡಾ. ಎಚ್. ರಾಮಚಂದ್ರಸ್ವಾಮಿ

ಬುದ್ಧ ಐತಿಹಾಸಿಕ ಸತ್ಯ; ಆದರೆ ಅವನ ಬಗ್ಗೆ ತಿಳಿದಿರುವುದು ಸ್ವಲ್ಪ. ಕ್ರಿ. ಪೂ. ೬೨೩ರಲ್ಲಿ ಹುಟ್ಟಿದ ಅವನ ಹೆಸರು ಸಿದ್ಧಾರ್ಥ ಗೌತಮ. ತಂದೆ ನೇಪಾಳದ ರಾಜ್ಯ ಕಪಿಲವಸ್ತುವಿನ ರಾಜ ಶುದ್ಧೋಧನ, ತಾಯಿ ಮಾಯಾ. ಅವನು ತನ್ನ ಎಳೆಯ ಪತ್ನಿ ಯಶೋಧರೆ, ಪುತ್ರ ರಾಹುಲರನ್ನೂ, ರಾಜ್ಯವನ್ನೂ ತ್ಯಜಿಸಿ ಮುನಿಯಾದನು.

ಮಾನವರ ದುಃಖಪರಿಹಾರದ ಮಹೋದ್ದೇಶವನ್ನಿಟ್ಟುಕೊಂಡು ಪರಿವ್ರಾಜಕ ಸಂನ್ಯಾಸಿಯಾಗಿ ಆರು ವರ್ಷಗಳ ಕಾಲ ಅಲೆದಾಡಿದ ಸಿದ್ಧಾರ್ಥನಿಗೆ ಯಾರಿಂದಲೂ, ಯಾವುದರಿಂದಲೂ ತೃಪ್ತಿ ದೊರಕಲಿಲ್ಲ. ಅನಂತರ ಒಂದು ಮರದಡಿ ಕುಳಿತು ಆಮರಣಾಂತ ತೀವ್ರ ತಪಸ್ಸನ್ನು ಕೈಕೊಂಡ ಅವನಿಗೆ ಆಗ 'ಬೋಧಿ' ಅಥವಾ 'ಜ್ಞಾನೋದಯ' ಉಂಟಾಯಿತು. ಈ ವೃಕ್ಷಕ್ಕೆ ಬೋಧಿವೃಕ್ಷವೆಂದೂ, ಬಿಹಾರ ರಾಜ್ಯದಲ್ಲಿರುವ ಈ ಸ್ಥಳಕ್ಕೆ ಬೋಧಗಯಾ ಎಂದೂ ಹೆಸರಾಗಿದೆ. ಜ್ಞಾನೋದಯವಾದ ಮೇಲೆ ವಾರಾಣಸಿಗೆ ಬಂದ ಅವನು ತನ್ನ ಐವರು ಮಿತ್ರರಿಗೆ ಮೊತ್ತಮೊದಲಿಗೆ ಉಪದೇಶ ಮಾಡಿದನು. ಕ್ರಮೇಣ ಶಿಷ್ಯರ ಸಂಖ್ಯೆ ಹೆಚ್ಚಿತು; ಸಂಘವೂ ಸ್ಥಾಪನೆಯಾಯಿತು. ಸುಮಾರು ನಲವತ್ತೈದು ವರ್ಷಗಳ ಕಾಲ ಬಿಹಾರ, ಮಧ್ಯಪ್ರದೇಶ, ಉತ್ತರಪ್ರದೇಶ, ನೇಪಾಳ ಮುಂತಾದೆಡೆ ತಿರುಗಾಡುತ್ತ, ಜಾತಿ, ವರ್ಗ, ವಯಸ್ಸು, ಲಿಂಗ, ವಿದ್ಯೆ ಇತ್ಯಾದಿಗಳ ಯಾವ ಭಿನ್ನತೆಯನ್ನೂ ಪರಿಗಣಿಸದೆ ಬುದ್ಧನು ಜನರಿಗೆ ಮುಕ್ತವಾಗಿ ತನ್ನ ಉಪದೇಶಗಳನ್ನು ಕೊಟ್ಟನು. ತನ್ನ ಮೃದುವಚನ, ಶಾಂತ ಹಾಗೂ ದಯಾಪೂರ್ಣ ವ್ಯಕ್ತಿತ್ವದಿಂದಾಗಿ, ಬೋಧನೆಯ ಸರಳತೆಯಿಂದಾಗಿ, ಜನರಿಗೆ ಅವನು ಇಷ್ಟವಾದನು; ಬೌದ್ಧಮತವು ಬಹುಬೇಗ ಹರಡಿತು.

ಮನುಷ್ಯನು ಸ್ವಪ್ರಯತ್ನದಿಂದಲೇ ತನ್ನ ಕಷ್ಟಗಳನ್ನು ನೀಗಿಕೊಳ್ಳಬೇಕೆಂದೂ, ಭಗವತ್ಕೃಪೆ ಮೊದಲಾದುವೆಲ್ಲ ಸುಳ್ಳೆಂದೂ, ('ನಿಮಗೆ ನೀವೇ ಬೆಳಕಾಗಿರಿ, ನಿಮಗೆ ನೀವೇ ಆಶ್ರಯವಾಗಿರಿ') ಆಸೆಯನ್ನು ತ್ಯಜಿಸಿದರೆ ದುಃಖದಿಂದ ಪಾರಾಗಬಹುದೆಂದೂ ಬುದ್ಧನು ಸಾಯುವ ಕ್ಷಣದವರೆಗೂ ಶ್ರಮಪಟ್ಟು ಎಲ್ಲರಿಗೂ ಬೋಧಿಸಿದನು.

ಬುದ್ಧನ ಬೋಧನೆಗಳನ್ನು ಹೀಗೆ ಸಂಗ್ರಹಿಸಬಹುದು: **ಮೊದಲನೆಯದಾಗಿ, ಜೀವನದಲ್ಲಿ ದುಃಖ ಎಂಬುದು ಇದೆ.** ನಮ್ಮ ಹುಟ್ಟು, ಸಾವು, ರೋಗ, ಮುಪ್ಪು, ಬಂಧುಮಿತ್ರರ ವಿರಹ, ಅನಿಷ್ಟರ ಸಹವಾಸ, ಇಚ್ಛೆಸಿದ್ದು ಸಿಕ್ಕದಿರುವುದು – ಒಟ್ಟಿನಲ್ಲಿ ಈ ಮನಸ್ಸು–ದೇಹಗಳ ವ್ಯವಸ್ಥೆಯೇ ದುಃಖಮಯ. **ಎರಡನೆಯದಾಗಿ, ದುಃಖಕ್ಕೆ ಕಾರಣವಿದೆ.** ಮೂಲಕಾರಣವೆಂದರೆ



**ಬುದ್ಧನು ಒಬ್ಬ ಐತಿಹಾಸಿಕ ವ್ಯಕ್ತಿ. ಆತನ ಬೋಧನೆಯು ಅವನ ಜೀವಿತದಲ್ಲಿಯೇ ಹಾಸುಹೊಕ್ಕಾಗಿದೆ. ಬುದ್ಧನ ಬದುಕಿನ ಹಿನ್ನೆಲೆಯಲ್ಲಿ, ಆತನ ಸಾರ್ವಕಾಲಿಕ ಮತ್ತು ಸಾರ್ವತ್ರಿಕ ಉಪದೇಶಗಳನ್ನು ವಿವರಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ನೋಡುತ್ತೇವೆ. ದಿವಂಗತ ಲೇಖಕರು ಮೈಸೂರು ವಿಶ್ವವಿದ್ಯಾನಿಲಯದ ವಿವೇಕಾನಂದ ಪೀಠದ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ವಿಜ್ಞಾನ ಅಧ್ಯಾಪಕರಾಗಿದ್ದ ಅವರು ಹಲವಾರು ಪುಸ್ತಕಗಳನ್ನು ರಚಿಸಿದ್ದಾರೆ ಮತ್ತು ಅನುವಾದಿಸಿದ್ದಾರೆ.**

ಮನುಷ್ಯ ತನ್ನ ನಿಜಸ್ವರೂಪವನ್ನು ತಿಳಿದುಕೊಳ್ಳದೇ ಇರುವುದು, ಅಜ್ಞಾನ. ಇದರಿಂದಾಗಿಯೇ ಅವನು ದೇಹ–ಮನಸ್ಸುಗಳಿಗೆ ಅಂಟಿಕೊಳ್ಳುತ್ತಾನೆ; ಈ ಅಂಟಿನ ನಂಟು ಕಾರ್ಯಕಾರಣ ಸಂಬಂಧದಿಂದಾಗಿ, ಕರ್ಮಗಳ ಮೂಲಕ ಪುನರ್ಜನ್ಮಕ್ಕೆ ಕಾರಣವಾಗುತ್ತದೆ. ಹೀಗೆ ಹುಟ್ಟುಸಾವುಗಳ ಚಕ್ರಕ್ಕೆ ಮನುಷ್ಯ ಸಿಕ್ಕಿಕೊಳ್ಳುತ್ತಾನೆ. ಈ ಯಾತನಾಮಯ ಪರಿಸ್ಥಿತಿಗೆ ಆಯಾ ವ್ಯಕ್ತಿಯೇ ಕಾರಣವೇ ಹೊರತು ವಿಧಿ, ಆಕಸ್ಮಿಕ ಇತ್ಯಾದಿಗಳೆಲ್ಲ ಸುಳ್ಳು. **ಮೂರನೆಯದಾಗಿ, ಈ ಯಾತನೆ ಕೊನೆಗೊಳ್ಳುವುದು ಸಾಧ್ಯವಿದೆ.** ದುಃಖಕ್ಕೆ ಕಾರಣವಿದ್ದ ಮೇಲೆ, ಅದನ್ನು ನಿರ್ಮೂಲನ ಮಾಡಿದರೆ ದುಃಖವೂ ಹೋಗಲೇಬೇಕಲ್ಲವೆ? ಲೋಕದಲ್ಲಿ ನಡೆಯುವ ಎಲ್ಲ ಘಟನೆಗಳೂ ಕಾರಣವಿದ್ದೇ ಸಂಭವಿಸುತ್ತವೆ. ಕಾರಣವಿಲ್ಲದೆ ಯಾವುದೂ ಆಗುವುದಿಲ್ಲ. ಇದೇ ಬುದ್ಧನ 'ಪ್ರತೀತ್ಯಸಮುತ್ಪಾದ' ಸಿದ್ಧಾಂತ. **ನಾಲ್ಕನೆಯದಾಗಿ, ದುಃಖವನ್ನು ಪರಿಹರಿಸಿಕೊಳ್ಳುವುದಕ್ಕೆ ದಾರಿ ಇದೆ.** ದುಃಖದ ಮೂಲಕಾರಣವಾದ ಅಜ್ಞಾನವನ್ನು ನಿರ್ವಾಣದಿಂದ ಕಳೆದುಕೊಂಡರೆ ದುಃಖ ಇಲ್ಲವಾಗುತ್ತದೆ. ನಿರ್ವಾಣವೆಂದರೆ, ಪರಿಪೂರ್ಣ ಜ್ಞಾನ ಅಥವಾ 'ಬೋಧಿ'ಯನ್ನು ಪಡೆದುಕೊಳ್ಳುವುದು; ಆಸೆಗಳೆಂಬ ಜ್ವಾಲೆಗಳನ್ನು ಆರಿಸುವುದು. ಆಗ ಶಾಂತಿ, ಆನಂದ ಹಾಗೂ ಎಲ್ಲ ಜೀವಿಗಳ ಮೇಲೆ ಕರುಣೆ – ಇವು ದೊರೆಯುತ್ತವೆ. ನಿರ್ವಾಣವನ್ನು ಪಡೆಯುವುದಕ್ಕೆ 'ಅಷ್ಟಾಂಗಿಕ ಮಾರ್ಗ' ಇದೆ. ಇದನ್ನು 'ಮಧ್ಯಪಂಥ' ಎಂದೂ ಕರೆಯುತ್ತಾರೆ ('ಮಧ್ಯಪಂಥ' ಎಂದರೆ ತಪಸ್ಸನ್ನಾಗಲಿ ಭೋಗವನ್ನಾಗಲಿ ಅತಿರೇಕಕ್ಕೆ ಕೊಂಡೊಯ್ಯದಿರುವುದು). ಇದನ್ನು ಯಾರು ಬೇಕಾದರೂ ಅನುಸರಿಸಬಹುದು:

೧. **ಸಮ್ಯಕ್ ದೃಷ್ಟಿ:** ಮೇಲಿನ ನಾಲ್ಕು ಸತ್ಯಗಳನ್ನು ಸರಿಯಾಗಿ ತಿಳಿದುಕೊಳ್ಳುವುದು.

೨. **ಸಮ್ಯಕ್ ಸಂಕಲ್ಪ:** ಅದರಂತೆ ಜೀವನವನ್ನು ಅಳವಡಿಸಿಕೊಳ್ಳುತ್ತೇನೆಂದು ನಿರ್ಧಾರ ಮಾಡುವುದು.

೩. **ಸಮ್ಯಕ್ ವಾಕ್ಕು:** ಸುಳ್ಳು, ಪರುಷವಾಕ್ಯ, ಪಿಸುಣತನ ಇತ್ಯಾದಿಗಳಿಂದ ದೂರವಿರುವುದು.

೪. **ಸಮ್ಯಕ್ ಕ್ರಿಯಾ:** ಕೊಲೆ, ಕಳ್ಳತನ, ಶೀಲ ಕಳೆದುಕೊಳ್ಳುವಿಕೆ, ಮದ್ಯಪಾನ ಇತ್ಯಾದಿಗಳನ್ನು ಮಾಡದಿರುವುದು.

೫. **ಸಮ್ಯಕ್ ಆಜೀವ:** ಆಯುಧ, ಮಾಂಸ, ಪ್ರಾಣಿಗಳು, ಅಮಲುಪದಾರ್ಥ, ವಿಷ ಇತ್ಯಾದಿಗಳನ್ನು ಮಾರಿ ಜೀವಿಸದಿರುವುದು.

೬. **ಸಮ್ಯಕ್ ವ್ಯಾಯಾಮ:** ಕೆಟ್ಟ ವಿಚಾರಗಳು ಬಾರದಂತೆ ತಡೆದು, ಬಂದುವನ್ನು ನಾಶಪಡಿಸುವುದು ಮತ್ತು ಒಳ್ಳೆಯ ವಿಚಾರಗಳನ್ನು ಮನಸ್ಸಿಗೆ ತಂದುಕೊಂಡು ಬೆಳೆಸುವುದು.

೭. **ಸಮ್ಯಕ್ ಸ್ಮೃತಿ:** ಈ ದೇಹ–ಮನಸ್ಸುಗಳ ವ್ಯವಸ್ಥೆ ಶಾಶ್ವತವಲ್ಲ ಎಂಬುದನ್ನು ನೆನಪಿನಲ್ಲಿಟ್ಟುಕೊಂಡಿರುವುದು.

೮. **ಸಮ್ಯಕ್ ಸಮಾಧಿ:** ಮನಸ್ಸು ಸಂಪೂರ್ಣವಾಗಿ ಶಾಂತವಾಗುವವರೆಗೆ ಧ್ಯಾನ–ಚಿಂತನೆಗಳನ್ನು ತಪ್ಪದೆ ಮಾಡಿ ಸತ್ಯಪ್ರಕಾಶವನ್ನು ಪಡೆದುಕೊಳ್ಳುವುದು.

ಈ ಎಂಟು ಹಂತಗಳಲ್ಲಿ ನೈತಿಕತೆ, ಸಾಧನೆ, ಸಾಕ್ಷಾತ್ಕಾರ ಎಲ್ಲವೂ ಇವೆ. ಮೊದಲಿನ ಎರಡು ವಿವೇಕದ ಮಾರ್ಗಗಳು; ಅನಂತರದ ನಾಲ್ಕು ಮಾರ್ಗಗಳು ಶೀಲ ರೂಪಿಸುವಂಥವು; ಕೊನೆಯ ಎರಡು ಏಕಾಗ್ರತೆಯನ್ನು ದೊರಕಿಸಿಕೊಡುವಂಥವು.

ಬುದ್ಧನ ಬೋಧನೆಗಳ ಮುಖ್ಯವಾದ ಅಂಶವೇ ಸ್ವಾರ್ಥವನ್ನು ಬಿಡುವುದು, ಜೀವಕಾರುಣ್ಯವನ್ನು ಬೆಳೆಸಿಕೊಳ್ಳುವುದು. ಬುದ್ಧನು ಸ್ವತಃ ಇವೆರಡೂ ಗುಣಗಳು ಮೈವೆತ್ತು ಬಂದಂತೆ ಇದ್ದನು. ಲೋಕದಲ್ಲಿ ಇರುವ ಕೇಡನ್ನು ಎದುರಿಸುವುದಕ್ಕೆ ಹೋಗಬಾರದು ಮಾತ್ರವಲ್ಲ, ಮನಸ್ಸಿಗೂ ತಂದುಕೊಳ್ಳಬಾರದು ಎಂಬುದು ಅವನ ಬೋಧನೆ. ಯಾವುದೇ ಶ್ರುತಿ, ದೇವರು, ವಿಧಿ, ಆತ್ಮ, ಸ್ವರ್ಗ, ನರಕ ಮುಂತಾದುವುಗಳ ಸೊಲ್ಲೇ ಇಲ್ಲದಿರುವುದು ಬೌದ್ಧಮತದ ವಿಶೇಷ. ಉಳಿದಂತೆ ಹಿಂದೂ ಧರ್ಮದ ತತ್ತ್ವಗಳೆಲ್ಲವೂ ಇಲ್ಲಿ ಅಡಕವಾಗಿರುವುದನ್ನು ನಾವು ಕಾಣಬಹುದು.

ಹಿಂದೂಧರ್ಮವು ಬುದ್ಧನನ್ನು ವಿಷ್ಣುವಿನ ಒಂದು ಅವತಾರವೆಂದು ಒಪ್ಪಿಕೊಂಡಿದೆ. ಇಡೀ ಭಾರತೀಯ ದರ್ಶನಗಳನ್ನು ಸರ್ವೇಕ್ಷಣ ಮಾಡುವ ಮಾಧವಾಚಾರ್ಯರ (ಕ್ರಿ. ಶ. ೧೪೦೦) 'ಸರ್ವದರ್ಶನ ಸಂಗ್ರಹ'ದಲ್ಲಿ ಇರುವ ಹದಿನಾರು ದರ್ಶನಗಳಲ್ಲಿ ಬೌದ್ಧಧರ್ಮಕ್ಕೆ ಎರಡನೆಯ ಸ್ಥಾನವನ್ನು ಕೊಟ್ಟಿದ್ದಾರೆ. ಸಾಮಾನ್ಯವಾಗಿ ಬೌದ್ಧಧರ್ಮವನ್ನು ಭಾರತೀಯ ತತ್ತ್ವಶಾಸ್ತ್ರದ ಪರಿಧಿಯೊಳಗೇ ಪರಿಗಣಿಸುತ್ತಾರೆ. ಮೊದಮೊದಲನೆಯ ವೈಷ್ಣವ ಕವಿಯಾದ ಜಯದೇವನು ತನ್ನ 'ದಶಾವತಾರ ಸ್ತೋತ್ರ'ದಲ್ಲಿ **'ನಿಂದಸಿ ಯಜ್ಞವಿಧೇರಹಹ ಶ್ರುತಿಜಾತಂ । ಸದಯ ಹೃದಯ ದರ್ಶಿತಪಶುಘಾತಂ । ಕೇಶವಧೃತ ಬುದ್ಧಶರೀರ ಜಯಜಗದೀಶ ಹರೇ'** ಎಂದು ಸ್ತುತಿಸಿದ್ದಾನೆ. ಬಂಗಾಳದ ವೈಷ್ಣವ ಪಂಥದವರ ಅಹಿಂಸಾತತ್ತ್ವವು ಬೌದ್ಧಧರ್ಮದಿಂದಲೇ ಬಂದುದಾಗಿದೆ. ಗಿರೀಶಚಂದ್ರ ಘೋಷ್ (೧೮೮೭) ತನ್ನ 'ಬುದ್ಧಚರಿತ' ಎಂಬ ನಾಟಕದಲ್ಲಿ ಬುದ್ಧನನ್ನು ಅವತಾರಪುರುಷ ಎಂದು ಚಿತ್ರಿಸಿದ್ದಾನೆ. ಭಾರತದಲ್ಲಿ ಬೌದ್ಧಧರ್ಮವು ನಾಶವಾಗಲಿಲ್ಲ, ಉಪನಿಷತ್ತುಗಳಲ್ಲಿ ಹುಟ್ಟಿದ ಅದು ನವಯುಗದ ಹಿಂದೂಧರ್ಮವಾಯಿತು ಎಂದು ಧಾರಾಳವಾಗಿ ಹೇಳಬಹುದು. ಕಾಲಾನುಕ್ರಮದಲ್ಲಿ ಬೌದ್ಧಧರ್ಮವು ಮಹಾಯಾನ, ಹೀನಯಾನ ಎಂಬ ಎರಡು ಪಂಥಗಳಾಗಿ ಒಡೆದುದಲ್ಲದೆ ಮುಂದೆ ಲೆಕ್ಕವಿಲ್ಲದಷ್ಟು ಉಪಪಂಥಗಳಾಗಿ ವಿಭಜಿತವಾಯಿತು; ಅದರ ಸಾಹಿತ್ಯ ಏಷ್ಯಾದ ಅನೇಕಾನೇಕ ಭಾಷೆಗಳಲ್ಲಿ ರಚಿತವಾಯಿತು. ಮುಖ್ಯವಾಗಿ ಬೌದ್ಧ ಧರ್ಮಶಾಸ್ತ್ರವೆನಿಸಿದ ಪಾಲಿ ಭಾಷೆಯ ತ್ರಿಪಿಟಕಗಳನ್ನು ಅಶೋಕ ಚಕ್ರವರ್ತಿಯು ಕ್ರಿ. ಪೂ. ೨೫೩ರಲ್ಲಿ ಪಾಟಲೀಪುತ್ರದಲ್ಲಿ ನಡೆಸಿದ ಮೂರನೆಯ ಧರ್ಮಸಮ್ಮೇಳನದ ನಂತರ ಬರೆಯಲಾಯಿತೆಂದು ಇತಿಹಾಸ ಹೇಳುತ್ತದೆ. ಅಲ್ಲಿಯವರೆಗೆ ಬುದ್ಧನ ಉಪದೇಶಗಳು ಕರ್ಣಾಕರ್ಣಿತವಾಗಿ ಉಳಿದುಕೊಂಡು ಬರುವಾಗ ಸಾಕಷ್ಟು ಮಾರ್ಪಾಟನ್ನು ಪಡೆದಿರಬೇಕು. ತ್ರಿಪಿಟಕಗಳಲ್ಲಿ **ವಿನಯಪಿಟಕ** (ಬುದ್ಧನ ಜೀವನ,

ಸಂಘದ ಸ್ಥಾಪನೆ, ಅದರ ನಿಯಮಾವಳಿಗಳು), **ಸುತ್ತ ಪಿಟಕ** (ಬುದ್ಧನ ಸಾಮಾನ್ಯ ಉಪದೇಶಗಳು) ಹಾಗೂ **ಅಭಿಧಮ್ಮಪಿಟಕ** (ಸೂಕ್ಷ್ಮತರ ಉಪದೇಶಗಳು) ಎಂಬ ಮೂರು ಭಾಗಗಳಿವೆ.

ಜೀವನಮೌಲ್ಯಗಳ ಪರಮೋಚ್ಚ ಸೋಪಾನಗಳನ್ನೇರಿ ಕೈಲಾಸಸದೃಶ ಶಿಖರವನ್ನು ತಲುಪಿದ ಮಹಾಮಾನವ ಗೌತಮಬುದ್ಧ. ನಲವತ್ತೈದು ವರ್ಷಗಳಷ್ಟು ದೀರ್ಘಕಾಲ ಎಡೆಬಿಡದೆ ಉಪದೇಶ ಮಾಡುತ್ತ ಜನರನ್ನು ಉದ್ಧರಿಸಲು ಪ್ರಯತ್ನಿಸಿದ ಆತನಂತಹ ಇನ್ನೊಂದು ಉದಾಹರಣೆ ಧರ್ಮದ ಚರಿತ್ರೆಯಲ್ಲಿ ಇಲ್ಲ. ಹತ್ತಾರು ಶತಮಾನಗಳಿಂದ ಬುದ್ಧನ ಧ್ಯಾನಮುದ್ರೆಯ ಪ್ರತಿಮೆಗಳು ನಮ್ಮ ಬದುಕಿಗೆ ದಾರಿದೀಪ ಗಳಾಗಿವೆ. ಆಶ್ಚರ್ಯವಾಗಿ ಮರೆತೇಹೋದಂತಿದ್ದ ಬುದ್ಧನ ಬೋಧನೆಗಳನ್ನು, ಆದರ್ಶವನ್ನು ಸಂಶೋಧನಾತ್ಮಕ ಬರಹಗಳ ಮೂಲಕ ಬೆಳಕಿಗೆ ತಂದ ಪಾಶ್ಚಾತ್ಯ ವಿದ್ವಾಂಸರಿಗೆ ಭಾರತವು ಕೃತಜ್ಞವಾಗಿರಬೇಕು.

ಬುದ್ಧನ ಸಾಧನಾಮಾರ್ಗ ಹೇಗಿತ್ತೆಂಬುದನ್ನು ಈಗ ಕಾಲಘಟ್ಟದಲ್ಲಿ ನಿರ್ಣಯಿಸುವುದು ಸುಲಭವಲ್ಲ. ಯಾವುದೇ ಧರ್ಮಗ್ರಂಥ, ದೇವರು, ವಿಧಿ, ಆತ್ಮ, ಸ್ವರ್ಗನರಕಾದಿಗಳನ್ನು ಆತ ನಿರಾಕರಿಸಿದನಾದರೂ, ಹಿಂದೂಧರ್ಮಕ್ಕಿಂತ ಭಿನ್ನವಾಗಿ ಬೌದ್ಧಧರ್ಮ ನಿಂತಿತಾದರೂ, ಭಾರತದ ಧಾರ್ಮಿಕ ವಿಕಾಸ ದಿಂದಾಗಿಯೇ ಬುದ್ಧನ ಚಿಂತನೆ ಹೊರಹೊಮ್ಮಿತೆಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಧ್ಯಾನ, ಸಂನ್ಯಾಸ – ಇವು ಈ ಸಾಧನಾಮಾರ್ಗದಲ್ಲಿ ಕೇಂದ್ರಸ್ಥಾನ ಪಡೆದುಕೊಂಡಿವೆ. ಅಂತರಂಗದ ಮೇಲಣ ಪ್ರಭುತ್ವವು ಭೌತಿಕ ಪ್ರಭುತ್ವಕ್ಕಿಂತ ಪ್ರಮುಖವಾದದ್ದು. ಇದಕ್ಕೆ ಮನಸ್ಸಿನ ಪರಿಶುದ್ಧಿ ಅಗತ್ಯ. ಇದಕ್ಕೆ ಮಾರ್ಗ ಧ್ಯಾನ.

ಬುದ್ಧ ಪ್ರಾಚೀನವಾದ ವಿಪಶ್ಯನ ಧ್ಯಾನ ಪ್ರಕ್ರಿಯೆಯನ್ನು ಬೋಧಿಸಿದನೆಂಬ ನಂಬಿಕೆ ಇದೆ. ಇದು ವಸ್ತು ಹೇಗಿದೆಯೋ ಹಾಗೆ ವೀಕ್ಷಿಸುವ ಒಂದು ಒಳನೋಟ. ವಸ್ತು ಅಥವಾ ಸ್ಥಿತಿ ಯನ್ನು ವಿಭಜನೆ ಅಥವಾ ವಿಶ್ಲೇಷಣೆ ಮಾಡಿ ಸಾಕ್ಷೀಭಾವ ದಿಂದ ನೋಡುವುದು ಎನ್ನುವುದು ಇದಕ್ಕಿರುವ ಇನ್ನೊಂದು ಅರ್ಥ. ತೋರಿಕೆಯನ್ನು ಕಡೆಗಣಿಸಿ ವಾಸ್ತವವನ್ನು ಅರ್ಥ ಮಾಡಿಕೊಂಡಾಗ, ಮನೋವಿಕಾರ, ತಳಮಳ, ಸಂಚಿತ ಬಂಧನ ಗಳಿಂದ ಮುಕ್ತವಾದ ಪ್ರಜ್ಞೆಯ ಜೀವನವನ್ನು ನಡೆಸಲು ಸಾಧಕ ತೊಡಗುವನು. ಧ್ಯಾನಕ್ಕೆ ಮೊದಲು ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯೆ ಹಾಗೂ ಮಾದಕ ವಸ್ತುಗಳನ್ನು ಸೇವಿಸದಿರುವ **'ಶೀಲ'** ಅಗತ್ಯ. ಇದರಿಂದ ಸಾಧಕನ ಮನಸ್ಸು ವಿಕಾರಗಳಿಂದ ಉತ್ತೇಜಿತವಾಗದೆ, ಆತನು ಅಂತರಂಗದ ಆಳಕ್ಕೆ ಹೋಗಲು ಸಾಧ್ಯವಾಗುತ್ತದೆ.

ಮುಂದಿನ ಹಂತ ಮನಸ್ಸನ್ನು ಏಕಾಗ್ರಗೊಳಿಸಿ ವಶಗೊಳಿಸುವ **'ಸಮಾಧಿ'**. ಸ್ವಾಭಾವಿಕವಾದ ಉಸಿರು ಒಳಗೆ ಹೊರಗೆ ಬಂದು ಹೋಗುವುದನ್ನು, ಅದು ಉಂಟುಮಾಡುವ ಸಂವೇದನೆ ಯನ್ನು ನೋಡುವುದರಿಂದ ಇದು ಸಿದ್ಧಿಯಾಗುತ್ತದೆ. ಉಸಿರು ದೇಹ ಮನಸ್ಸುಗಳ ನಡುವಣ ಕೊಂಡಿ; ಇದು ನಮ್ಮದೇ ಅಂಶವಾಗಿದೆ, ಹೊರಗಿನದಲ್ಲ; ಇದು ವರ್ತಮಾನದಲ್ಲಿ ಸದಾ ಇರುವಂತಹದು. ಈ ಗಮನಿಸುವಿಕೆ ಮನಸ್ಸನ್ನು ಎಲ್ಲ ಓಲಾಟ ಗಳಿಂದ ಮುಕ್ತಗೊಳಿಸಿ, ಸೂಕ್ಷ್ಮವಾಗುವಂತೆ ಮಾಡುತ್ತದೆ.

ಕೊನೆಯ ಹಂತ **'ಪ್ರಜ್ಞಾ'**. ತಲೆಯಿಂದ ಪಾದದ ತುದಿಯ ವರೆಗೆ ಹಾಗೂ ಅನಂತರ ಪಾದದ ತುದಿಯಿಂದ ತಲೆಯವರೆಗೆ ಶರೀರದಲ್ಲಿ ಉಂಟಾಗುತ್ತಿರುವ ಎಲ್ಲ ಸಂವೇದನೆಗಳನ್ನೂ ನಿಧಾನವಾಗಿ ಸಮಚಿತ್ತತೆಯಿಂದ ಗಮನಿಸುವುದು. ಈ ಸಂವೇದನೆಗಳು ಹುಟ್ಟಿ, ಕೆಲವು ಕಾಲ ಇದ್ದಂತೆ ತೋರಿ, ಅನಂತರ ಮಾಯವಾಗುವುವು. ಇವು ಅನಿತ್ಯ ಹಾಗೂ ಪರಿವರ್ತನಶೀಲವಾದುವು. 'ನಾನು' ಎನ್ನುವ ಎಲ್ಲವೂ ಕ್ಷಣಿಕ, ಬರಿಯ ತೋರುವಿಕೆ ಮಾತ್ರ ಎನ್ನುವುದು ಇದರಿಂದ ಅನುಭವಕ್ಕೆ ಬರುವುದು. ಇಂತಹ 'ನಾನು, ನನ್ನದು' ಎಂಬುದರಲ್ಲಿ ಆಸಕ್ತನಾದರೆ ಅದು ದುಃಖಕ್ಕೆ ಕಾರಣವಾಗುವುದು ಎಂಬುದೂ ತಿಳಿಯುವುದು.

ಪ್ರಜ್ಞೆಯಲ್ಲಿ ಮೂರು ಹಂತಗಳಿವೆ. **ಶ್ರೋತಮಯ** (ಶಾಸ್ತ್ರ ಗಳಿಂದ ತಿಳಿದ ಜ್ಞಾನ, ಪ್ರೇರಕ ಮಾತ್ರ), **ಚಿಂತನಾಮಯ** (ಮನನ ಮಾಡಿ ಸ್ವೀಕಾರ), **ಭಾವನಾಮಯ** (ಅನುಭವ, ಅನುಭೂತಿಯ ಬಲದಿಂದ ಸಾಕ್ಷಾತ್ಕರಿಸಿಕೊಳ್ಳುವುದು). ನಮ್ಮ ಗುರಿ ಭಾವನಾಮಯ ಪ್ರಜ್ಞೆ. ಪ್ರಜ್ಞೆಯ ಮೊದಲ ಹಂತದಲ್ಲಿ ಮನಸ್ಸು ದೃಢವಾಗಿ, ಹಳೆಯ ವಾಸನೆಗಳು ನಶಿಸುತ್ತ ಹೋಗು ತ್ತವೆ; ಹೊಸ ವಿಕಾರಗಳಿಗೆ ಅವಕಾಶವಿರದು. ಹೀಗಾದಾಗ ಪ್ರಜ್ಞೆ ಮುಂದಿನ ಹಂತವಾದ **ಅನಾತ್ಮ ಬೋಧೆ**ಯನ್ನು (ನಾನು, ನನ್ನದು ಎಂಬ ಭಾವನೆಯ ಅಭಾವ) ಹೊಂದುತ್ತದೆ. ವಾಸ್ತವಿಕ ವಾಗಿ 'ನಾನು– ನನ್ನದು', 'ನೀನು–ನಿನ್ನದು' ಎಂಬ ವ್ಯವಹಾರಕ್ಕೆ ಕಾರಣ ಜಗತ್ತಿನ ಆಸಕ್ತಿಯೇ. ನಮ್ಮ ಶರೀರ ಮತ್ತು ಚಿತ್ತದ ಬಗೆಗೆ ನಮಗೆ ಇರುವ ಗಾಢವಾದ ಆಸಕ್ತಿಯಿಂದ ಹೊರ ಬಂದು, ಅನುಭೂತಿಯ ಮಟ್ಟದಲ್ಲಿ ಇವೆಲ್ಲವೂ ಕ್ಷಣಿಕವಾದ ತರಂಗಗಳು ಮಾತ್ರ ಎಂದು ತಿಳಿದಾಗ, ರಾಗ–ದ್ವೇಷಗಳೆಲ್ಲವೂ ಮಾಯವಾಗುತ್ತವೆ.

**'ಸಬ್ಬೋ ಪಜ್ಜಲಿತೋ ಲೋಕೋ, ಸಬ್ಬೋ ಲೋಕೋಪ ಕಂಪಿತೋ'** (ಲೋಕವೆಲ್ಲವೂ ಪ್ರಜ್ವಲ, ಲೋಕವೆಲ್ಲ ಉದಯ–ವ್ಯಯದ ಪ್ರಕಂಪನ) ಎಂಬ ಸಾಕ್ಷೀಭಾವವು ದುಃಖದ ವಾಸ್ತವ ಅರಿವನ್ನು ಸೂಕ್ಷ್ಮತಮವಾಗಿ ಉಂಟುಮಾಡುತ್ತವೆ. ಶರೀರದ ಹೊರಗಿನ ಸಂವೇದನೆಗಳನ್ನು, ಒಂದು ಸಣ್ಣ ಭಾಗವನ್ನೂ ಬಿಡದೆ ಪೂರ್ತಿಯಾಗಿ ಗಮನಿಸುವುದು ಸಾಧ್ಯವಾದಮೇಲೆ, ಒಳಗಿನ ಸಂವೇದನೆಗಳನ್ನು ನೋಡಬಹುದು. ಎಲ್ಲವೂ ಪ್ರತಿಕ್ಷಣ ಬದಲಾವಣೆ ಹೊಂದುತ್ತಿರುವುದನ್ನು ಅನುಭೂತಿಯ ಸ್ತರದಲ್ಲಿ ಅರಿತು, ಅದಕ್ಕೆ ಅನುಸಾರವಾಗಿ ನಮ್ಮ ಜೀವನವನ್ನು ಪರಿವರ್ತಿಸಿಕೊಳ್ಳುವುದೇ ಧರ್ಮ. ಃ




# ಜೀವನ ಮಕರಂದ

('ಬದುಕಲು ಕಲಿಯಿರಿ' ಪುಸ್ತಕದ ಸಂಗ್ರಹ)

ಮೂಲ ಲೇಖಕರು : ಸ್ವಾಮಿ ಜಗದಾತ್ಮಾನಂದ ಸಂಗ್ರಹ : ಡಾ. ಜಿ.ವಿ. ಕುಲಕರ್ಣಿ

ಅಧ್ಯಾಯ ಮೂರು

## ಚಿಂತೆಯ ಚಿತೆಯಿಂದ ಪಾರಾಗಿ

**"ಚಿಂಕ್ರೋಭ (=ಚಿಂತಾಕ್ರೋಶಭಯೋದ್ವೇಗವು) ನಿಮ್ಮ ರಕ್ತಸಂಚಾರ, ಜೀರ್ಣಾಂಗವ್ಯೂಹ ಹಾಗೂ ನರಮಂಡಲಗಳ ಮೇಲೆ ತನ್ನ ಮಾರಕ ಪ್ರಭಾವವನ್ನುಂಟುಮಾಡಿ ನಿಮ್ಮ ಆರೋಗ್ಯ ವನ್ನು ಹದಗೆಡಿಸೀತು. ಕಠಿಣ ಪರಿಶ್ರಮದಿಂದ ಯಾರೂ ಸತ್ತುದನ್ನು ನಾನರಿಯೆ. ಆದರೆ ಚಿಂಕ್ರೋಭದಿಂದ ಕಂಗಾಲಾಗಿ ಸತ್ತುಹೋದವರು ಹಲವು ಮಂದಿ."**

**– ಡಾ. ಚಾರ್ಲ್ಸ್ ಮೇಯೋ**

**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿ ವಿಭ್ರಮಃ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥**

**– ಭಗವದ್ಗೀತಾ (೨ : ೬೩)**

**ಸ್ವಾ**ಮಿ ಜಗದಾತ್ಮಾನಂದರು ತಮ್ಮ ಪರಿಣತ ಪ್ರಜ್ಞೆ, ಅಪಾರ ಓದು ಹಾಗೂ ಅನುಭವದ ಪರಿಪಾಕವನ್ನು ಈ ಅಧ್ಯಾಯದಲ್ಲಿ ಎರಕಹೊಯ್ದಿದ್ದಾರೆ. ಚಿಂತೆಯಿಲ್ಲದವರು ಯಾರು? ಒಬ್ಬ ವ್ಯಕ್ತಿಯಿಂದ ಹಿಡಿದು ರಾಷ್ಟ್ರದವರೆಗಿನ ಚಿಂತೆಗಳ ಬಗ್ಗೆ ಇಲ್ಲಿ ಒಳನೋಟಗಳಿವೆ. ಸಂಸ್ಕೃತದಲ್ಲಿಯ ಸುಭಾಷಿತದ ಪ್ರಕಾರ 'ಚಿತೆ' ಮತ್ತು 'ಚಿಂತೆ' ಇವುಗಳಲ್ಲಿ ಬಿಂದುಮಾತ್ರ ಭೇದವಿದೆ. ಚಿತೆ ದೇಹವನ್ನು ಮಾತ್ರ ಸುಡುತ್ತದೆ. ಆದರೆ ಚಿಂತೆ ದೇಹವನ್ನೂ ಮನಸ್ಸನ್ನೂ ಸುಡುತ್ತದೆ. ನಮ್ಮ ಮನವನ್ನು ಹಾಳುಮಾಡುವ 'ಚಿಂತೆ, ಆಕ್ರೋಶ, ಭಯ, ಉದ್ವೇಗ' ಇವೆಲ್ಲಕ್ಕೂ ಸೇರಿ 'ಚಿಂಕ್ರೋಭ' ಎಂಬ ಪದವನ್ನು ಸ್ವಾಮೀಜಿಯವರು ಇಲ್ಲಿ ಪ್ರಯೋಗಿಸುತ್ತಾರೆ. ಮನುಷ್ಯನ ಅಧಃಪತನದ ಮೆಟ್ಟಿಲುಗಳನ್ನು ಭಗವದ್ಗೀತೆ ಹೇಳುತ್ತದೆ. 'ಕ್ರೋಧದಿಂದ ಸಮ್ಮೋಹ, ಸಮ್ಮೋಹದಿಂದ ಸ್ಮೃತಿವಿಭ್ರಮ, ಸ್ಮೃತಿವಿಭ್ರಮದಿಂದ ಬುದ್ಧಿನಾಶ, ಬುದ್ಧಿನಾಶದಿಂದ ಸರ್ವನಾಶ.' 'ಕಾಮ, ಕ್ರೋಧ ಮತ್ತು ಲೋಭ' – ಇವು ಮೂರು ನರಕದ ಬಾಗಿಲುಗಳು ಎಂದೂ ಗೀತೆ ಸಾರುತ್ತದೆ.

ಕಾರ್ಯಭಾರ ತಲೆಭಾರವಾದಾಗ, ಚಿಂತೆ ಬೆಂತರವಾಗಿ ಕಾಡುತ್ತದೆ. 'ಚಿಂತೆಯನ್ನು ದೂರಕ್ಕೆಸೆಯಲಾರದ ವ್ಯಾಪಾರೋದ್ಯಮಿಗಳು ಯೌವನದಲ್ಲೇ ಸಾವನ್ನಪ್ಪುತ್ತಾರೆ' ಎಂದು ಅರ್ಥಗರ್ಭಿತವಾಗಿ ಡಾ. ಅಲೆಕ್ಸಿಸ್ ಕ್ಯಾರೆಲ್ ನುಡಿದಿದ್ದಾರೆ.

ಹೊಟ್ಟೆಹುಣ್ಣಿನ ರೋಗಕ್ಕೆ ಕಾರಣ ಮಾನಸಿಕ ಚಿಂತೆ, ಭಯೋದ್ವೇಗ ಎಂದು ಮೇಯೋ ಕ್ಲಿನಿಕ್‌ನ ಡಾ. ಅಲ್ವಾರಿಸ್ ಹೇಳುತ್ತಾರೆ. ನಾವು ನಿರಾಳವಾಗಿ (relax) ಇರಲು ಕಲಿಯದಿದ್ದರೆ ಮಾನಸಿಕ ಒತ್ತಡದಿಂದ ನಮ್ಮ ಆರೋಗ್ಯ ಹಾಳಾಗುತ್ತದೆ. "ರೋಗಕ್ಕೆ ಮದ್ದು ಕೊಡುವುದರ ಜೊತೆಗೆ ರೋಗಿಯನ್ನು ಅಕ್ಕರೆಯಿಂದ ನೋಡಿಕೊಂಡರೆ ಚಿಕಿತ್ಸೆ ಬೇಗ ಫಲಕಾರಿ ಆಗುತ್ತದೆ" ಎಂದು ಗ್ರೀಕ್ ತತ್ತ್ವಶಾಸ್ತ್ರಜ್ಞ ಪ್ಲೇಟೋ ಹೇಳಿದ್ದಾನೆ.

ಕತ್ತಿನ ಹಿಂಭಾಗದ ಬೇನೆ, ಗಂಟಲಿನಲ್ಲಿ ಗಡ್ಡೆಯ ಅನುಭವ, ಹೊಟ್ಟೆಯಹುಣ್ಣಿನ ನೋವು, ಗಾಲ್‌ಬ್ಲ್ಯಾಡರ್ ನೋವು, ವಾಯುವಿನ ತೊಂದರೆ, ತಲೆತಿರುಗುವುದು, ತಲೆನೋವು, ಬಳಲಿಕೆ – ಇವೆಲ್ಲಕ್ಕೂ ಶೇ. ೫೦ ರಿಂದ ೯೦ ರಷ್ಟು ಮಾನಸಿಕ ತೊಂದರೆಗಳೇ ಕಾರಣ ಎಂಬುದನ್ನು ವೈದ್ಯರು ಪ್ರಾಯೋಗಿಕವಾಗಿ ಕಂಡುಹಿಡಿದಿದ್ದಾರೆ.

ಕ್ರೋಧ ಎಂಬುದು ಬಹಳ ದೊಡ್ಡ ಮಾರಕ ಅಸ್ತ್ರವಾಗಿದೆ. ಅದರಿಂದ ರಕ್ತದೊತ್ತಡ ಹೆಚ್ಚುತ್ತದೆ, ಮಿದುಳಿನಲ್ಲಿ ರಕ್ತಸ್ರಾವ ಆಗಬಹುದು, ಹೃದಯನಾಳ ಸಂಕುಚಿತಗೊಳ್ಳಬಹುದು, ಹೃದಯಕ್ರಿಯೆ ನಿಂತು ಮರಣ ಕೂಡ ಸಂಭವಿಸಬಹುದು. "ಸಿಟ್ಟು ನಿಮ್ಮ ಮಿದುಳನ್ನು ಪ್ರವೇಶಿಸುವ ಮೊದಲು, ಅದು ತಲೆಬುರುಡೆಯಿಂದ ನಿಮ್ಮ ಬುದ್ಧಿಯನ್ನು ಹೊರಗೆ ಹಾಕಿ, ಆ ಬುದ್ಧಿಯು ತಿರುಗಿ ಒಳಗೆ ಬಾರದಂತೆ ತಲೆಯ ಎಲ್ಲ ಬಾಗಿಲುಗಳನ್ನೂ ಮುಚ್ಚಿಬಿಡುತ್ತದೆ" ಎಂದು ಪ್ಲುಟಾರ್ಕ್ ಹೇಳಿದ್ದಾನೆ. "ಉತ್ತಮರ ಕೋಪ ಒಂದು ಕ್ಷಣಕಾಲ ಇರುತ್ತದೆ. ಮಧ್ಯಮರ ಕೋಪ ಎರಡು ಗಂಟೆಯ ತನಕ ಇರುತ್ತದೆ. ಅಧಮರು ದಿನವಿಡೀ ಕೋಪಗೊಂಡರೆ, ದುರಾತ್ಮರು ಜೀವನಪರ್ಯಂತ ಕೋಪ ಉಳಿಸಿಕೊಳ್ಳುತ್ತಾರೆ" ಎಂಬ ನುಡಿ ಮಾರ್ಮಿಕವಾಗಿದೆ.

ಸ್ವಾಮಿ ವಿವೇಕಾನಂದರು ಒಮ್ಮೆ ರೈಲಿನಲ್ಲಿ ಪ್ರಯಾಣ ಮಾಡುತ್ತಿರುವಾಗ ಇಬ್ಬರು ಆಂಗ್ಲರು ಅವರ ಸಂನ್ಯಾಸಿ ಉಡುಗೆಯನ್ನು ಗೇಲಿಮಾಡಿ ಆಡಿಕೊಂಡರಂತೆ. ನಿಲ್ದಾಣದಲ್ಲಿ ಟಿಕೆಟ್ ಕಲೆಕ್ಟರ್‌ನೊಂದಿಗೆ ಸ್ವಾಮಿಜಿ ನಿರರ್ಗಳವಾಗಿ ಇಂಗ್ಲೀಷಿನಲ್ಲಿ ಮಾತಾಡುವುದನ್ನು ಕೇಳಿದಾಗ ಆಂಗ್ಲರಿಗೆ ನಾಚಿಕೆಯಾಯಿತು. "ಸ್ವಾಮೀಜಿಗೆ ಇಂಗ್ಲಿಷ್ ಬಂದೂ ಕೋಪಗೊಳ್ಳಲಿಲ್ಲವೇಕೆ?" ಎಂದು ಆಂಗ್ಲರು ಕೇಳಿದಾಗ ಸ್ವಾಮೀಜಿ ಉತ್ತರಿಸಿದರು, "ಅಜ್ಞಾನಿಗಳ ಮೇಲೆ ಸಿಟ್ಟಾಗಿ ನಾನು ನನ್ನ ಶಕ್ತಿ ಹಾಗೂ ಶಾಂತಿಯನ್ನು ಏಕೆ ತಾನೇ ಕೆಡಿಸಿಕೊಳ್ಳಲಿ?" ಎಂದು.

ಗೌತಮ ಬುದ್ಧ 'ಅಂಗುತ್ತರನಿಕಾಯ'ದಲ್ಲಿ ಬೌದ್ಧಭಿಕ್ಷುಗಳಿಗೆ ಐದು ಮಹತ್ವದ ಮಾತುಗಳನ್ನು ಹೇಳಿದ:

**೧) ವೃದ್ಧಾಪ್ಯ ಬಂದೇ ಬರುವದು.**
**೨) ರೋಗರುಜಿನ ಬರುವುದಿಲ್ಲವೆಂದು ಹೇಳಲಾಗದು.**
**೩) ಒಂದು ದಿನ ಮರಣ ಬರುವುದು ನಿಶ್ಚಿತ.**
**೪) ಪ್ರತಿಯೊಂದು ಪ್ರೀತಿಯ ವಸ್ತುವೂ ಬದಲಾವಣೆ ಹೊಂದುತ್ತದೆ.**
**೫) ಒಳಿತು ಕೆಡುಕುಗಳ ಕರ್ಮಫಲವನ್ನು ತಾನೇ ಉಣ್ಣಬೇಕು.**

ಈ ಐದನ್ನು ಗಮನಕ್ಕೆ ತಂದಾಗ 'ಅಹಂ' ಹಾಗೂ 'ಮಮಕಾರ' ಕಡಿಮೆ ಆಗಿ ದಿವ್ಯಪಥದಲ್ಲಿ ನಡೆಯಲು ಅನುಕೂಲವಾಗುವುದು ಎನ್ನುತ್ತಾನೆ ಬುದ್ಧ.

ಮನಸ್ಸಿನಲ್ಲಿ ಅಗಾಧ ಶಕ್ತಿಯಿದೆ. ತಾಳ್ಮೆ, ಪ್ರೀತಿ, ಕರುಣೆ, ದಾನಬುದ್ಧಿ, ನಿಸ್ವಾರ್ಥ ಸೇವಾಭಾವ – ಇವು ರಚನಾತ್ಮಕ ಭಾವನೆಗಳು. ಇವನ್ನು ಬೆಳೆಸಿಕೊಂಡರೆ ಉತ್ಸಾಹ ಹಾಗೂ ಆರೋಗ್ಯಕರ ಚಟುವಟಿಕೆಗಳಿಗೆ ಕಾರಣವಾಗುತ್ತವೆ. ಇದರಿಂದ ಸಂತೋಷ, ತೃಪ್ತಿ ಹಾಗೂ ಸೃಜನಶೀಲ ಪ್ರವೃತ್ತಿಗಳು ಜಾಗೃತ ವಾಗುತ್ತವೆ.

**ಪ್ರಸನ್ನತೆ, ಶಾಂತಿ, ಧೈರ್ಯ, ಆತ್ಮವಿಶ್ವಾಸ, ದೃಢನಿಶ್ಚಯ** – ಇವೇ ಮೊದಲಾದ ಭಾವನೆಗಳು ಆರೋಗ್ಯವರ್ಧಕ ಟಾನಿಕ್‌ನಂತೆ ಕೆಲಸಮಾಡುತ್ತವೆ. ಮನುಷ್ಯನ ಬಂಧನಕ್ಕೂ ಮೋಕ್ಷಕ್ಕೂ ಅವನ ಮನಸ್ಸೇ ಕಾರಣ. ಮನಸ್ಸಿನಲ್ಲಿ ಉದಿಸುವ 'ಯೋಚನೆ' ಎಂಬ ವಸ್ತುವಿನಿಂದ ವಿಷವನ್ನು ತಯಾರಿಸಬಹುದು, ಅಮೃತವನ್ನೂ ತಯಾರಿಸಬಹುದು. ಶ್ರದ್ಧೆಯಿಂದ ಪ್ರಯತ್ನಿಸಿದರೆ ವಿಷವನ್ನೂ ಅಮೃತವನ್ನಾಗಿಸಬಹುದು.

ಕಾಯಿಲೆಯನ್ನು ಓಡಿಸುವ ಸರಳ, ಸಾರ್ವಕಾಲಿಕ, ಪುರಾತನ ಸೂತ್ರಗಳ ಬಗ್ಗೆ ಲೇಖಕರು ಹೀಗೆ ಹೇಳುತ್ತಾರೆ:

**೧) ಜೀವಿಗಳಲ್ಲಿ ದಯೆ, ಅನುಕಂಪ, ಸಹಾನುಭೂತಿ**
**೨) ನಿಃಸ್ವಾರ್ಥತೆ, ಕಾರ್ಯತತ್ಪರತೆ ಮತ್ತು ವಿಶಾಲ ಮನೋಭಾವ**
**೩) ಬಿಗುಮಾನ ತೊರೆದು ನಗುವನ್ನು ಹೊರಸೂಸುವ ಗುಣ**
**೪) ಪರೋಪಕಾರ, ಸಹಕಾರ, ಉದಾರ ಗುಣಗಳನ್ನು ಮೈಗೂಡಿಸಿ ಕೊಳ್ಳುವುದು**
**೫) 'ತನ್ನಂತೆ ಇತರರು' ಎಂಬ ವಿಶ್ವಬಂಧುತ್ವ ಭಾವ**
**೬) ತಾಳ್ಮೆ (ತಾಳಿದವ ಬಾಳಿಯಾನು)**
**೭) 'ಮಾತು ಕಡಿಮೆ, ಜಾಸ್ತಿ ದುಡಿಮೆ' ಎಂಬ ತತ್ತ್ವದ ಅನುಷ್ಠಾನ**
**೮) ಪೂರ್ವಾಪರ ವಿಮರ್ಶೆ, ವಿವೇಕ**
**೯) ದಿನನಿತ್ಯದ ಪ್ರಾರ್ಥನೆ**

**'ಮನೋಬಲವೇ ಮಹಾಬಲ'** ಎಂದು ಅರಿಯುವುದು, ಯೋಗಾಸನ ಹಾಗೂ ಧ್ಯಾನ, ಯಮ (ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ) ಹಾಗೂ ನಿಯಮ (ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ) – ಇವುಗಳ ಆಚರಣೆ ಆರೋಗ್ಯಕರ ಜೀವನಕ್ಕೆ ಕಾರಣವಾಗುವ ಅಂಶಗಳು.

"ಮನುಷ್ಯನನ್ನು ಮೆಚ್ಚಿಸುವುದು ಬೇಡ; ಭಗವಂತನನ್ನು ಮೆಚ್ಚಿಸಲು ಕೆಲಸ ಮಾಡಿರಿ; ಶ್ರದ್ಧೆಯಿಂದಲೇ ಸಿದ್ಧಿ" ಎಂದು ನಂಬಿ ಬಾಳಬೇಕು. ಶ್ರದ್ಧೆಯೇ ಭಯವನ್ನು ನಿವಾರಿಸುವ ಅಸ್ತ್ರ. ಭಯದಿಂದ ಸಂಶಯ, ಸಂಶಯದಿಂದ ಕೋಪ, ಕೋಪದಿಂದ ಹಿಂಸೆ, ಹಿಂಸೆಯಿಂದ ಸರ್ವನಾಶಕ ದುರಂತ. "ನಿನ್ನನ್ನು ನೀನು ತಿದ್ದಿಕೊಂಡರೆ ಜಗತ್ತಿನಲ್ಲಿ ಒಬ್ಬ ಮೂರ್ಖ ಕಡಿಮೆಯಾದಂತೆ" ಎಂಬ ಕಾರ್ಲೈಲನ ನುಡಿಯಲ್ಲಿ ಎಂಥ ಸತ್ಯ ಅಡಗಿದೆ!

**ಬೆಚ್ಚಿದರೆ ಬೆದರಿಕೆ.** ಭಯದಿಂದ ದೂರ ಇರಲು ಪ್ರಯತ್ನಿಸ ಬೇಕು. ದೇವರ ಭಯವೇ ಜ್ಞಾನದ ಆರಂಭ. ಹಾಗೆಂದೇ ವಿಷ್ಣುಸಹಸ್ರನಾಮದಲ್ಲಿ ದೇವರಿಗೆ **'ಭಯಕೃತ್, ಭಯನಾಶನಃ'** ಎಂಬ ಹೆಸರುಗಳು ಉಲ್ಲೇಖವಾಗಿವೆ. "ಸುಸಂಸ್ಕೃತ ಸಜ್ಜನ ಗೃಹಕ್ಕೆ ಸಮಾನವಾದ ಶಾಲೆ ಇನ್ನೊಂದಿಲ್ಲ. ಸತ್ಯಸಂಧರೂ, ಗುಣವಂತರೂ ಆದ ತಂದೆತಾಯಂದಿರಿಗೆ ಸಮಾನರಾದ ಅಧ್ಯಾ ಪಕರು ಇನ್ನಿಲ್ಲ" ಎನ್ನುತ್ತಾರೆ ಗಾಂಧೀಜಿ.

**'ನಿರ್ಭೀತಿಯ ಚಾಂಪಿಯನ್ ಭೀತಿಯಿಂದ ಸತ್ತ'** ಎಂಬ ಕಥೆ ಮಾರ್ಮಿಕವಾಗಿದೆ. ವೈಜ್ಞಾನಿಕ ಮನೋವೃತ್ತಿಯುಳ್ಳ ಒಬ್ಬ ತರುಣ, ಅಮಾವಾಸ್ಯೆಯ ರಾತ್ರಿ ಶ್ಮಶಾನಕ್ಕೆ ಹೋಗಿ ಅಲ್ಲಿ ಒಂದು ಗೂಟ ನೆಟ್ಟು ಬರುವುದಾಗಿ ಗೆಳೆಯರೊಡನೆ ಪಂದ್ಯ ಕಟ್ಟುತ್ತಾನೆ. ಇದು ಅವನ ನಿರ್ಭೀತಿಯ ಮನಸ್ಸಿಗೆ ಸಾಕ್ಷಿಯಾಗುತ್ತಿತ್ತು. ಆದರೆ ಅವನು ಗೂಟನೆಟ್ಟು ಮರಳಿ ಬರುವಾಗ ಅವನ ಉತ್ತರೀಯ ವನ್ನು ಯಾರೋ ಬಲವಾಗಿ ಹಿಡಿದು ಎಳೆದಂತಾಯಿತು. ಇದರಿಂದ ಅವನು ಭೀತಿಗೊಂಡು ನೆಲಕ್ಕೆ ಬಿದ್ದು ಸತ್ತೇಹೋದ. ಆದರೆ ಅವನು ಮೈಮರವೆಯಿಂದ ತನ್ನ ಉತ್ತರೀಯವನ್ನು ಗೂಟಕ್ಕೆ ಕಟ್ಟಿದ್ದನ್ನು ಮರೆತ. ಅದು ತಿಳಿದಿದ್ದರೆ ಅವನು ಸಾಯು ತ್ತಿರಲಿಲ್ಲ.

ಭಯವನ್ನು ಅಭ್ಯಾಸದಿಂದ ದೂರಗೊಳಿಸುವುದು ಸಾಧ್ಯ. ಚಿಂತೆ, ಸಂತೋಷ, ಸಿಟ್ಟು, ಶಾಂತತೆ – ಇವು ಹೇಗೆ ಮನಸ್ಸಿನ ಸ್ವಭಾವವೋ, ಹಾಗೆಯೇ ಭಯವು ಕೂಡಾ ಮನಸ್ಸಿನ ಒಂದು ಸ್ವಭಾವ. ಅದನ್ನು ಅಭ್ಯಾಸದ ಮೂಲಕ ತೆಗೆದುಹಾಕಬೇಕು.

ನಾವು ಹಣದ ವ್ಯವಹಾರವನ್ನು ಹೇಗೆ ಮಾಡಬೇಕೆಂಬುದನ್ನು ಗಾಂಧೀಜಿಯವರಿಂದ ಕಲಿಯಬೇಕು. ಅವರು ಸೆರೆಮನೆ ಯಲ್ಲಿದ್ದಾಗ ಸರಕಾರ ಅವರಿಗೆ ಪ್ರತಿ ತಿಂಗಳು ಖರ್ಚಿಗೆಂದು ೨೦೦ ರೂಪಾಯಿ ಕೊಡುತ್ತಿತ್ತಂತೆ. ಅವರು ೩೫ ರೂಪಾಯಿ ಖರ್ಚು ಮಾಡಿ ಉಳಿದ ಹಣ ಮರಳಿ ಕೊಡುತ್ತಿದ್ದರಂತೆ. "ಹಣವನ್ನು ಹೇಗೆ ಸಂಪಾದಿಸಬೇಕೆಂಬುದು ಎಲ್ಲರಿಗೂ ತಿಳಿದಿದೆ. ಆದರೆ ಅದನ್ನು ಹೇಗೆ ವೆಚ್ಚಮಾಡಬೇಕೆಂಬುದು ಲಕ್ಷ ದಲ್ಲಿ ಒಬ್ಬನಿಗೂ ಸರಿಯಾಗಿ ತಿಳಿದಿಲ್ಲ" ಎಂಬ ಅಮೂಲ್ಯ ಹೇಳಿಕೆಯಿದೆ.

ಜನಪ್ರಿಯ ಮುಂದಾಳು, ಖ್ಯಾತ ಅರ್ಥಶಾಸ್ತ್ರಜ್ಞ ಹಾಗೂ ಪ್ರಸಿದ್ಧ ಬ್ಯಾಂಕರ್ ಆದ ಗಣ್ಯರೊಬ್ಬರು ಯುವಕರಿಗೆ ಆರ್ಥಿಕ ಯಶಸ್ಸಿನ ರಹಸ್ಯವನ್ನು ಹೀಗೆ ಹೇಳಿಕೊಡುತ್ತಾರೆ:

೧) ನೀವು ಗಳಿಸಲು ಸಾಧ್ಯವಾದುದಕ್ಕಿಂತ ಹೆಚ್ಚು ವೆಚ್ಚ ಮಾಡಬೇಡಿರಿ.

೨) ನಿಮಗೆ ಸಾಲವಿದ್ದರೆ ಅದನ್ನು ಮೊದಲು ತೀರಿಸಿರಿ.

೩) ಯಾವಾಗಲೂ ಸಾಲದಿಂದ ದೂರವಿರಲು ಪ್ರಯತ್ನಿಸಿರಿ. 'ಅನಂತರ ಕೊಟ್ಟರಾದೀತು' ಎಂಬ ವ್ಯಾಪಾರಿಗಳ ಮಾತಿಗೆ ಮರುಳಾಗದಿರಿ.

೪) ಅವಶ್ಯಕವೆಂದು ಖಚಿತವಾದರೆ ಮಾತ್ರ ವೆಚ್ಚಮಾಡಿರಿ.

೫) ಇದ್ದುದರಲ್ಲಿ ಸ್ವಲ್ಪವಾದರೂ ಉಳಿಸುವ, ಉಳಿಸಿದ್ದನ್ನು ಬೆಳೆಸುವ ಕಲೆಯನ್ನು ಕಲಿಯಿರಿ.

ಫ್ರಾನ್ಸಿಸ್ ಬೇಕನ್‌ನ ಹೇಳಿಕೆ ಇದು: "ಹಣ ಒಳ್ಳೆಯ ಸೇವಕನಾಗಬಹುದು. ದುಷ್ಟ ಯಜಮಾನನೂ ಆಗಬಹುದು. ಹಣ ನಿಮ್ಮ ಸೇವಕನಾಗಲಿ; (ಆದರೆ) ನೀವು ಅದರ ದಾಸರಾಗಬೇಡಿ."

ಗೆಲುವಿನ ಗುಟ್ಟಿನ ಬಗ್ಗೆ ಲೇಖಕರು, "ತಾಳ್ಮೆ, ಸಹನೆ, ಪ್ರಾಮಾಣಿಕತೆ – ಇವುಗಳ ತ್ರಿಕರಣ ಸಾಂಗತ್ಯ ಅವಶ್ಯ" ಎನ್ನುತ್ತಾರೆ.

ಗೌತಮ ಬುದ್ಧ ಮನುಷ್ಯರನ್ನು ಅವರ ಆಸಕ್ತಿ, ಗಮನ, ಪರಿಸರ – ಇವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾಲ್ಕು ವಿಭಾಗವಾಗಿ ವಿಂಗಡಿಸಿದ್ದನಂತೆ:

೧) ಕತ್ತಲೆಯಿಂದ ಕತ್ತಲೆಗೆ ಹೋಗುವವರು.

೨) ಬೆಳಕಿನಿಂದ ಕತ್ತಲೆಗೆ ಹೋಗುವವರು.

೩) ಕತ್ತಲೆಯಿಂದ ಬೆಳಕಿನೆಡೆ ಹೋಗುವವರು.

೪) ಬೆಳಕಿನಿಂದ ಬೆಳಕಿನೆಡೆಗೆ ಹೋಗುವವರು.

ಜೀವನದಲ್ಲಿ ಶ್ರದ್ಧೆ ಬಹಳ ಮಹತ್ವದ್ದು. ದೀರ್ಘಕಾಲದ ಸಾಧನೆ, ಭಜನೆ, ನಿಷ್ಠೆಯ ಪ್ರಾರ್ಥನೆ, ಸತ್ಸಂಗ, ಸದ್ಗ್ರಂಥಗಳ ಅಭ್ಯಾಸ ಹಾಗೂ ಸ್ವಾನುಭವದಿಂದ ಶ್ರದ್ಧೆ ದೃಢವಾಗುತ್ತದೆ. "ಶ್ರದ್ಧಾರಹಿತ ಪ್ರಾರ್ಥನೆ ಅಂಚೆಚೀಟಿಯಿಲ್ಲದ ಪತ್ರದಂತೆ, ಭಕ್ತಿರಹಿತ ಪ್ರಾರ್ಥನೆ ವಿಳಾಸ ಬರೆಯದ ಪತ್ರದಂತೆ, ಶ್ರದ್ಧೆ–ಭಕ್ತಿ ಸಹಿತವಾಗಿ ವ್ಯಾಕುಲತೆಯಿಂದ ಮಾಡಿದ ಪ್ರಾರ್ಥನೆ ಟೆಲಿಗ್ರಾಂ ಕೊಟ್ಟಂತೆ."

ಖ

## ಓದುವುದು – ಒಳಗಾಗಿಸಿಕೊಳ್ಳುವುದು

ಮಾನವನ ವಿಕಾಸಕ್ಕೆ ಭಾಷೆ ತನ್ನದೇ ಆದ ಕೊಡುಗೆ ನೀಡಿದೆ. ಜ್ಞಾನದ ಸಂಗ್ರಹ ಹಾಗೂ ಸಂವಹನೆ ಭಾಷೆಯಿಂದ ಮಾತ್ರ ಸಾಧ್ಯ. ಲಿಪಿಯನ್ನು ಕಂಡುಕೊಂಡಮೇಲೆ ಆಲೋಚನೆಗಳಿಗೆ ಖಚಿತತೆ ಬಂತು; ಅಪಾರ ಮಾಹಿತಿಯನ್ನು ಹೆಚ್ಚು ಜನರಿಗೆ ತಲುಪಿಸುವುದು ಸಾಧ್ಯವಾಯಿತು. ಎಲ್ಲರೂ ಅರ್ಥಪೂರ್ಣ ಸಾಮಾನ್ಯ ಶಿಕ್ಷಣವನ್ನು ಪಡೆಯುವಂತೆ ಆಯಿತು. ಆದರೆ ಭಾಷೆ ದುರ್ಬಲ. ಮಾತಿನಲ್ಲೂ ನಾವು ನಮ್ಮ ಉದ್ದೇಶಿತ ವಿಚಾರವನ್ನು ಪೂರ್ಣವಾಗಿ ಸಂವಹನಗೊಳಿಸಲಾರೆವು. ಅದಕ್ಕೆ ಕಣ್ಣಿನ ನೋಟ, ಧ್ವನಿಯ ಏರಿಳಿತ, ದೇಹ ಭಂಗಿಗಳ ಸಹಾಯ ಅಗತ್ಯ. ಇನ್ನು ಬರವಣಿಗೆಯಲ್ಲಿ ಸಂವಹನ ತೀರ ಕಷ್ಟ. ಆದರೂ ಬರಹ ನಮ್ಮ ಅನಿಸಿಕೆಯನ್ನು ಖಚಿತವಾಗಿಸುತ್ತದೆ ಎಂಬ ಭಾವನೆ ಇದೆ. ಮಾತು ಬದಲಾಗುವಂತಹುದು; ಬರಹ ದಾಖಲೆ. ಏಕೆ ಎಂದು ತಿಳಿಯದಿದ್ದರೂ ನಮಗೇ ಗೊತ್ತಿಲ್ಲದಂತೆ ಮುದ್ರಿತ ವಿಚಾರ ಸತ್ಯ ಎಂದು ನಂಬುವುದು ಮಾನವ ಮನಸ್ಸಿನ ಅಚ್ಚರಿಗಳಲ್ಲಿ ಒಂದು. ನಮ್ಮ ಶಿಕ್ಷಣವಂತೂ ಮುದ್ರಿತ ಪಠ್ಯವನ್ನು ಓದುವುದನ್ನು ಕಡ್ಡಾಯಗೊಳಿಸಿದೆ. ಜ್ಞಾಪಕಶಕ್ತಿಯ ಪರೀಕ್ಷೆ ಆಗಿದೆ, ನಮ್ಮ ಪರೀಕ್ಷೆಗಳು. ಅರ್ಥವಾಗಲಿ ಇಲ್ಲದಿರಲಿ, ಉರು ಹೊಡೆದು ಬರೆದರಾಯಿತು. ಸರಿಯಾಗಿ ಅರ್ಥವಾಗದೆ ಇರುವುದನ್ನು ಪುನಃ ಪುನಃ ಓದುವುದು ಬೇಸರದ ಸಂಗತಿ. ಅದಕ್ಕಾಗಿಯೇ ನಮ್ಮ ಹುಡುಗರು ಪರೀಕ್ಷೆ ಹತ್ತಿರ ಬರುವವರೆಗೂ ಓದುವುದನ್ನು ಮುಂದಕ್ಕೆ ಹಾಕುವುದು.

ಇದಲ್ಲದೆ ಹವ್ಯಾಸವಾಗಿ ಇಷ್ಟಪಟ್ಟ ಪುಸ್ತಕಗಳನ್ನು ಓದುವುದೂ ಇದೆ. ಸುಲಭವಾಗಿ ನಮ್ಮ ಮನಸ್ಸು ಕಲ್ಪನೆಗಳಲ್ಲಿ ಮುಳುಗುವ, ಪಾತ್ರಗಳ ಜತೆ ಒಂದಾಗುವ ಸ್ವಭಾವ ಹೊಂದಿರುವುದರಿಂದ ಸಾಹಿತ್ಯ ಓದುವುದು, ಅನುಭವಿಸುವುದು ರಂಜನೆ ನೀಡುತ್ತದೆ. ಭಾಷೆಯ ಮೇಲೆ ಹಿಡಿತವಿರುವವರು, ಸಂಗೀತ ತಿಳಿದವರು ಕಾವ್ಯದ ರಸವನ್ನು ಆಸ್ವಾದಿಸಬಲ್ಲರು. ವೈಚಾರಿಕ ಸಾಹಿತ್ಯವನ್ನು ಓದುವವರೂ ಇದ್ದಾರೆ. ಆದರೆ, ಆ ವಿಚಾರಗಳನ್ನು ಅಳವಡಿಸಿಕೊಂಡು ತಮ್ಮ ಜೀವನವನ್ನು ಪರಿವರ್ತಿಸಿಕೊಂಡವರು ವಿರಳ. 'ಅನ್ ಟು ದಿ ಲಾಸ್ಟ್' ಪುಸ್ತಕ ಓದಿ ಗಾಂಧೀಜಿ ಪ್ರಭಾವಿತರಾಗಿ, ತುಂಬ ಬದಲಾದರು ಎಂದು ಓದಿದಾಗ, 'ಹೇಗೆ ಇದು ಸಾಧ್ಯ, ನಮಗೆ ಏನೂ ಆಗಲಿಲ್ಲವಲ್ಲ?' ಎನಿಸುತ್ತದೆ. ಇದಕ್ಕೆ ಕಾರಣ ಡಿ.ವಿ.ಜಿ. ಹೇಳುವಂತೆ: ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ । ಚಿತ್ತದೊಳು ಬೆಳೆದರಿವು ತರು ತಳೆದ ಪುಷ್ಪ ॥ ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ । ಶಾಸ್ತ್ರಿತನದಿಂದಲ್ಲ–ಮಂಕುತಿಮ್ಮ ॥

ಅಂತರೀಕ್ಷಣೆ ಅಥವಾ ಆತ್ಮಾವಲೋಕನದಿಂದ ಬರುವ ಅನುಭವ ಅನುಭಾವವಾಗಿ ಗಟ್ಟಿಗೊಂಡು ನಿಲ್ಲುತ್ತದೆ. ತನ್ನನ್ನು ಲೆಕ್ಕಿಸದೆ, ಪ್ರೀತಿ ತೋರಿ ಬೆಳೆಸುವ ತಾಯಿ, ತಂದೆ, ಗುರು ಮೊದಲಾದ ಹಿರಿಯರ ಶ್ರೇಷ್ಠತೆಯ ಬಗ್ಗೆ ಗೌರವ ತೋರಿ, ಎಲ್ಲರೂ ಒಟ್ಟುಗೂಡಿ ನಡೆಸುವ ಅಧ್ಯಯನದ ಬಗ್ಗೆ, ಅದು ಶಾಶ್ವತವಾಗಿ ನಿಲ್ಲುವ ಬಗ್ಗೆ ತೈತ್ತಿರೀಯ ಉಪನಿಷತ್ತು ವಿವರಿಸಿದೆ. ಅನ್ನಮಯ ಕೋಶ, ಮನೋಮಯ ಕೋಶ, ಪ್ರಾಣಮಯ ಕೋಶ, ವಿಜ್ಞಾನಮಯ ಕೋಶ, ಆನಂದಮಯ ಕೋಶ ಎಂಬ ಕ್ರಮವಾಗಿ ಉನ್ನತಿಗೆ ಏರುವ ಪಂಚಕೋಶಗಳನ್ನು ಹೇಳಿ, ಅಧ್ಯಯನದಿಂದ ಪಡೆದ ಜ್ಞಾನ ಕ್ರಮೇಣ ಉನ್ನತ ಮಟ್ಟಕ್ಕೆ ಏರಬೇಕು ಎಂದು ಹೇಳುತ್ತದೆ. ಓದಿನಿಂದ ಪಡೆದ ಅರಿವು ಹೀಗೆ ಚಿತ್ತದಲ್ಲಿ ಬೆಳೆಯುತ್ತ ಹೋಗಬೇಕು. ಪದಗಳಲ್ಲೇ ಸಿಕ್ಕಿಕೊಳ್ಳುವ ನಮಗೆ ಇದು ಸಾಧ್ಯವೆ? ಸಾಹಿತ್ಯ ಓದುಗರಿಗೆ ಭರವಸೆ ತರಬೇಕು. ಪುಸ್ತಕ ಕೊಳ್ಳುವುದು, ಯಾಂತ್ರಿಕವಾಗಿ ಓದುವುದರಿಂದ ಪ್ರಯೋಜನ ಇಲ್ಲ. ಓದಿನಿಂದ ಬದುಕಿನಲ್ಲಿ ಹೊಸ ಹೊಳಹುಗಳು ಮೂಡಬೇಕು. ರಸಾನುಭೂತಿಯಿಂದ ನಮ್ಮ ಮನಸ್ಸಿಗೆ ಸಂಸ್ಕಾರ ಒದಗಿ ಸಾರ್ಥಕ ಎನ್ನಿಸಬೇಕು.

– ಡಾ. ಎಚ್. ಪಾಂಡುರಂಗ ವಿಠಲ, ಮೈಸೂರು

## ಸ್ವಾಮಿ ವಿವೇಕಾನಂದರ ದೃಷ್ಟಿಯಲ್ಲಿ

# ಧರ್ಮ ಮತ್ತು ವೈಜ್ಞಾನಿಕತೆ

**ಪಿ.ಅರುಳಪ್ಪ**

**ಸ್ವಾಮಿ ವಿವೇಕಾನಂದರು ಧರ್ಮ ಮತ್ತು ವಿಜ್ಞಾನಗಳ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. 'ಧರ್ಮವೂ ವಿಜ್ಞಾನವೇ' ಎಂಬುದು ಅವರ ಖಚಿತವಾದ ಅಭಿಪ್ರಾಯ. ಈ ಅಂಶವನ್ನು ಸ್ವಾಮೀಜಿಯವರ ಭಾಷಣಗಳ ಆಧಾರದ ಮೇಲೆ ಪ್ರಾಮಾಣಿಕವಾಗಿ ಬಿಂಬಿಸಿರುವ ಲೇಖಕರು ಮೈಸೂರು ವಿಶ್ವವಿದ್ಯಾನಿಲಯದ ತತ್ತ್ವಶಾಸ್ತ್ರ ಅಧ್ಯಯನ ವಿಭಾಗದ ಯು.ಜಿ.ಸಿ. ರಾಜೀವ್ ಗಾಂಧಿ ರಾಷ್ಟ್ರೀಯ ಶಿಷ್ಯವೇತನ ಕಾರ್ಯಕ್ರಮದಲ್ಲಿ ಹಿರಿಯ ಸಂಶೋಧಕರಾಗಿದ್ದಾರೆ.**

ಧರ್ಮ ಮತ್ತು ವಿಜ್ಞಾನಗಳು ನಂಬಿಕೆ ಮತ್ತು ವಿಚಾರಗಳ ನಡುವಣ ಹೋರಾಟವನ್ನು ಪ್ರತಿಬಿಂಬಿಸುತ್ತವೆ. ಸ್ವಾಮಿ ವಿವೇಕಾನಂದರ ಪ್ರಕಾರ, ಜ್ಞಾನದಲ್ಲಿ ಪಾರಮಾರ್ಥಿಕ ಮತ್ತು ವ್ಯಾವಹಾರಿಕ ಜ್ಞಾನಗಳೆಂಬ ಎರಡು ಹಂತಗಳಿವೆ. ಪಾರಮಾರ್ಥಿಕ ಜ್ಞಾನವನ್ನು 'ಪರಾ ವಿದ್ಯೆ' ಎಂದು ಕರೆಯುತ್ತಾರೆ. ವ್ಯಾವಹಾರಿಕ ಜ್ಞಾನವನ್ನು 'ಅಪರಾ ವಿದ್ಯೆ' ಯೆಂದು ಕರೆಯುತ್ತಾರೆ.

ವಿಜ್ಞಾನವು ವಿವೇಕಾನಂದರ ದೃಷ್ಟಿಯಲ್ಲಿ ಅಪರಾ ವಿದ್ಯೆಯನ್ನು ಪ್ರತಿಬಿಂಬಿಸುತ್ತದೆಯೇ ಹೊರತು ಪರಾ ವಿದ್ಯೆಯನ್ನಲ್ಲ. ಏಕೆಂದರೆ ಅದು ಬದುಕನ್ನು ಇಡಿಯಾಗಿ ಗ್ರಹಿಸುವುದಿಲ್ಲ. ಆದರೆ ನಿಜವಾದ ಧರ್ಮವು ನಮಗೆ ನೀಡುವ ಜ್ಞಾನವು ಅನಂತವೂ ಶಾಶ್ವತವೂ ಆಗಿದೆ. ದುರ್ದೈವದ ಸಂಗತಿ ಎಂದರೆ ಧರ್ಮಗಳು ತಿರಸ್ಕಾರಕ್ಕೆ ಒಳಗಾಗಿದೆ. ವಿಜ್ಞಾನವು ಅದರ ನಿಖರತೆಯನ್ನು ಅಥವಾ ಪ್ರಾಮಾಣ್ಯವನ್ನು ಪ್ರಶ್ನಿಸುತ್ತಿದೆ. ಇದಕ್ಕೆ ಒಂದು ಪ್ರಬಲವಾದ ಕಾರಣವಿದೆ. ಅದೆಂದರೆ, ಅನೇಕ ವೇಳೆ ಧರ್ಮಗಳು ವೈಜ್ಞಾನಿಕ ಪರೀಕ್ಷೆಗಳಿಗೆ ಒಳಪಡಲು ನಿರಾಕರಿಸುತ್ತವೆ. ಪರಿಣಾಮವಾಗಿ ವಿಜ್ಞಾನ ಮತ್ತು ಧರ್ಮಗಳಿಗೆ ಹೋರಾಟವು ಅನಿವಾರ್ಯವಾಗುತ್ತದೆ. ಧರ್ಮವು ಅನೇಕ ವಿಷಯಗಳ ಸತ್ಯತೆಯ ಬಗ್ಗೆ ತಾನೇ ಘೋಷಿಸಿಕೊಳ್ಳುತ್ತದೆ. ಈ ವಿಷಯದಲ್ಲಿ ವಿಜ್ಞಾನವು ತಲೆಹಾಕುವುದನ್ನು ಅದು ಸಹಿಸುವುದಿಲ್ಲ. ವಿಜ್ಞಾನವಾದರೋ ತನ್ನ ಹರಿತವಾದ ವಿಚಾರಶಕ್ತಿಯ ಮೂಲಕ ಧರ್ಮವು ಪ್ರಸ್ತಾಪಿಸುವ ಎಲ್ಲ ಸಂಗತಿಗಳನ್ನೂ ಚೂರು ಚೂರು ಮಾಡಲು ಪ್ರಯತ್ನಿಸುತ್ತದೆ. ಈ ಹೋರಾಟವು ವಿಶ್ವದಾದ್ಯಂತ ಹಿಂದೆ ನಡೆದಿದ್ದು, ಈಗಲೂ ಮುಂದುವರೆಯುತ್ತಿದೆ.

ಈ ದ್ವಂದ್ವಕ್ಕೆ ಏನಾದರೂ ಪರಿಹಾರವಿದೆಯೇ? ಅಂದರೆ ಧರ್ಮವು ವೈಚಾರಿಕ ಪರೀಕ್ಷೆಯನ್ನು ಎದುರಿಸಿ ನಿಲ್ಲಬಲ್ಲದೆ? ವಿಜ್ಞಾನದಲ್ಲಿ ಅಳವಡಿಸುವ ಮಾನದಂಡಗಳನ್ನೇ ಧರ್ಮಕ್ಕೂ ಅಳವಡಿಸಲು ಸಾಧ್ಯವೇ? ಈ ಪ್ರಶ್ನೆಗೆ ವಿವೇಕಾನಂದರು ಭಾವನಾತ್ಮಕ ಉತ್ತರವನ್ನು ನೀಡುತ್ತಾರೆ. ಧರ್ಮವು ವೈಚಾರಿಕ ಪರೀಕ್ಷೆಗೆ ಒಳಪಡಲಾರದೆಂದು ವಾದಿಸುವವರು ವಿರೋಧಾಭಾಸಕ್ಕೆ ಒಳಗಾಗುತ್ತಾರೆ. ಧಾರ್ಮಿಕ ಸತ್ಯಗಳನ್ನು ನಿರ್ಧರಿಸುವುದು ದಿಟವಾಗಿ ಪುಸ್ತಕಗಳಲ್ಲ. ಏಕೆಂದರೆ ಗ್ರಂಥಗಳಲ್ಲೇ ವಿರೋಧಾಭಾಸವಿದೆ. ಗ್ರಂಥಗಳಿಗಿಂತಲೂ ಮಿಗಿಲಾದ ಮತ್ತು ಧಾರ್ಮಿಕ ಸತ್ಯಗಳನ್ನು ಸಮರ್ಥಿಸಬಲ್ಲ ಒಂದು ಸಾರ್ವತ್ರಿಕ ಮಾನದಂಡವಿದೆ. ಅದೇ ವಿವೇಕಾನಂದರ ಪ್ರಕಾರ, **'ವಿಚಾರ'**.

ಇನ್ನು ವಿಚಾರವೆಂದರೇನು? **ವಿವೇಕಾನಂದರ ಪ್ರಕಾರ ಸಾಮಾನ್ಯದ ಮೂಲಕ ವಿಶೇಷ ಸಂದರ್ಭವನ್ನು ವಿವರಿಸುವುದೇ ವಿಚಾರ.** ಬೇರೆ ರೀತಿ ಹೇಳಬೇಕೆಂದರೆ, ಒಂದು ಸಾಮಾನ್ಯ ಸನ್ನಿವೇಶವನ್ನು ಅದಕ್ಕಿಂತಲೂ ವ್ಯಾಪಕವಾದ ಸಾಮಾನ್ಯದ ಮೂಲಕ ವಿವರಿಸುತ್ತ ಹೋದಲ್ಲಿ, ನಾವು ಅತ್ಯಂತ ವ್ಯಾಪಕವಾದ ಸಾಮಾನ್ಯಕ್ಕೆ ಬರುತ್ತೇವೆ. ಎಂದರೆ, ವಿಶೇಷಗಳನ್ನು

ಸಾಮಾನ್ಯದ ಮೂಲಕ, ಆ ಸಾಮಾನ್ಯವನ್ನು ಇನ್ನೂ ವ್ಯಾಪಕವಾದ ಸಾಮಾನ್ಯ ಉದಾಹರಣೆಯ ಮೂಲಕ ವಿವರಿಸುತ್ತಾ ಹೋಗಿ, ಕೊನೆಗೆ ಇನ್ನಾವ ಸಾಮಾನ್ಯದ ಮೂಲಕವೂ ವಿವರಿಸಲಾಗದಂತಹ ಅತ್ಯಂತ ಶ್ರೇಷ್ಠ ಸಾಮಾನ್ಯದ ಹಂತಕ್ಕೆ ತಲುಪುತ್ತೇವೆ. ಈ ಶ್ರೇಷ್ಠ ಸಾಮಾನ್ಯವನ್ನೇ ವಿವೇಕಾನಂದರು **ಸತ್** ಅಥವಾ **ಬ್ರಹ್ಮನ್** ಎಂದು ಕರೆಯುವುದು. ಈ ಸತ್ತೇ ವಿಶ್ವದ ಎಲ್ಲ ಆಗುಹೋಗುಗಳನ್ನು ವಿವರಿಸಬಲ್ಲ ಅತ್ಯಂತ ವಿಶಾಲವಾದ ಪರಿಕಲ್ಪನೆ.

ಉದಾಹರಣೆಗೆ **ಮನುಷ್ಯತ್ವ**ವು ಮಾನವವರ್ಗಕ್ಕೆ ಸೇರಿದ ಸಾಮಾನ್ಯ ಸಂಗತಿ. ಈ ಮನುಷ್ಯತ್ವದ ಮೂಲಕವೇ ನಾವು ಎಲ್ಲ ಬಿಡಿ ಮಾನವರನ್ನು ವಿವರಿಸುತ್ತೇವೆ. ಇನ್ನೂ ಮುಂದಕ್ಕೆ ಹೋದರೆ ಮನುಷ್ಯ, ಬೆಕ್ಕು, ನಾಯಿಗಳೇ ಮುಂತಾದವು **ಪ್ರಾಣಿ** ಎಂಬ ಇನ್ನೂ ವಿಶಾಲ ಪರಿಕಲ್ಪನೆಯಡಿಯಲ್ಲಿ ಬರುತ್ತವೆ. ಮತ್ತೂ ಮುಂದಕ್ಕೆ ಹೋದರೆ ಮನುಷ್ಯ, ನಾಯಿ, ಸಸ್ಯ ಮತ್ತು ಮರಗಳೇ ಮುಂತಾದವು ಇನ್ನೂ ವಿಶಾಲವಾದ **ಜೀವ** ಎಂಬ ಪರಿಕಲ್ಪನೆಯಡಿಯಲ್ಲಿ ಬರುತ್ತವೆ. ಪುನಃ ಈ ಎಲ್ಲಾ ಜೀವಗಳು ಮತ್ತು ನಿರ್ಜೀವ ವಸ್ತುಗಳು ಅತ್ಯಂತ ವಿಶಾಲವಾದ **ಸತ್** ಅಥವಾ **ಬ್ರಹ್ಮನ್** ಎಂಬ ಸಾಮಾನ್ಯ ಅಥವಾ ಸಾರ್ವತ್ರಿಕ ಪರಿಕಲ್ಪನೆಯಡಿಯಲ್ಲಿ ಬರುತ್ತವೆ. **ಹೀಗೆ ವಿಶೇಷವನ್ನು ವಿಶಾಲ ಪರಿಕಲ್ಪನೆಗೆ ಸಂಬಂಧಿಸಿ ವಿವರಿಸುವುದೇ ವಿಚಾರ.** ವಿವೇಕಾನಂದರ ಪ್ರಕಾರ ಮನಸ್ಸು ಎಂಬುದು ಇಂತಹ ಅನೇಕಾನೇಕ ಸಾಮಾನ್ಯಗಳನ್ನು ಹೊಂದಿರುವ ಪಾರಿವಾಳದ ಗೂಡಿನಂತಿದೆ. ಮನಸ್ಸೆಂಬ ಪಾರಿವಾಳದ ರಂಧ್ರಗಳಲ್ಲಿ ಎಲ್ಲ ಪರಿಕಲ್ಪನೆಗಳೂ ಒಂದಾಗಲು ಪ್ರಯತ್ನಿಸುತ್ತವೆ; ಪ್ರತಿ ಕಲ್ಪನೆಯೂ ತನ್ನ ಸ್ವರೂಪಕ್ಕೆ ಅನುಸಾರವಾಗಿ ಒಂದು ರಂಧ್ರವನ್ನು ಪಡೆದುಕೊಳ್ಳಲು ಯತ್ನಿಸುತ್ತದೆ. ನಮೂನೆಗೂ ರಂಧ್ರಕ್ಕೂ ಹೊಂದಿಕೆಯಾದಲ್ಲಿ ಮನಸ್ಸಿಗೆ ವಿಷಯದ ಅರಿವಾಗಿದೆ ಎಂದರ್ಥ. ಈ ಹೊಂದಾಣಿಕೆ ಇಲ್ಲದಿದ್ದಲ್ಲಿ ಮನಸ್ಸಿಗೆ ವಿಷಯದ ಅರಿವಾಗಿಲ್ಲ ಎಂದರ್ಥ. **ಒಟ್ಟಾರೆ ವಿವೇಕಾನಂದರ ಪ್ರಕಾರ ವಿಷಯಗಳ ವರ್ಗೀಕರಣವೇ ಜ್ಞಾನ.**

ಮತ್ತೊಂದು ವಾದದ ಪ್ರಕಾರ, ಜ್ಞಾನದ ಮೂಲ ಆಂತರಿಕವೇ ಹೊರತು ಬಾಹ್ಯವಲ್ಲ. ಅನೇಕ ನೈಸರ್ಗಿಕ ಘಟನೆಗಳಿಗೆ ವಾಸ್ತವವಾಗಿ ಅತಿನೈಸರ್ಗಿಕ ಶಕ್ತಿಗಳೇ ಕಾರಣವೆಂದು ಹೇಳಲಾಗುತ್ತಿತ್ತು. ಇದು ಸಂಗತಿಯನ್ನು ಹೊರಗಿನಿಂದ ವಿವರಿಸುವ ಪ್ರಯತ್ನ. ಆದರೆ ಗುರುತ್ವಾಕರ್ಷಣೆಯ ನಿಯಮವು ಸಂಗತಿಯನ್ನು ಅದರ ಮೂಲಕವೇ ವಿವರಿಸುವ ಪ್ರಯತ್ನವಾಗಿದೆ. ಒಂದು ಕಲ್ಲಿನ ಬೀಳುವಿಕೆಗೆ ಕಾರಣ ಯಾವುದೋ ಅತಿಮಾನುಷವಾದ ಶಕ್ತಿಯಲ್ಲ. ಈ ಘಟನೆಯ ವಿವರಣೆಯು ಕಲ್ಲಿನೊಳಗೇ ಇದೆ. ವಿಜ್ಞಾನವು ಘಟನೆಗಳನ್ನು, ಅವುಗಳ ಸ್ವರೂಪದ ಮೂಲಕ ವಿವರಿಸುತ್ತದೆಯೇ ಹೊರತು, ಅವುಗಳನ್ನು ಯಾವುದೋ ಒಂದು ಬಾಹ್ಯಶಕ್ತಿಗೆ ಸಂಬಂಧಿಸಿದಂತೆ ವಿವರಿಸುವುದಿಲ್ಲ. ಜಗತ್ತಿನಲ್ಲಿ ನಡೆಯುವ ಯಾವುದೇ ಘಟನೆಯನ್ನು ವಿವರಿಸಲು ನಮಗೆ ಬಾಹ್ಯಶಕ್ತಿಯ ಆವಶ್ಯಕತೆ ಇಲ್ಲ. ವಿಜ್ಞಾನಿಗೆ ಜಗತ್ತನ್ನು ವಿವರಿಸಲು ಭೂತಪ್ರೇತಗಳ ಅಗತ್ಯವಿಲ್ಲ. ಇದು ವಿಜ್ಞಾನದ ಒಂದು ಪ್ರಮುಖ ಲಕ್ಷಣ.

ಈ ವಿಷಯಕ್ಕೆ ಸಂಬಂಧಿಸಿದ ಹಾಗೆ ಧರ್ಮಗಳಲ್ಲಿ ಒಂದು ಕೊರತೆ ಇದೆ. ಆದ್ದರಿಂದಲೇ ಅವುಗಳಲ್ಲಿ ಅವೈಚಾರಿಕತೆಯು ಎದ್ದುಕಾಣುವುದು. ಧರ್ಮದಲ್ಲಿ ಒಂದು ಪ್ರಾಚೀನ ಸಿದ್ಧಾಂತವಿದೆ. ಇದರ ಪ್ರಕಾರ ವಿಶ್ವದಿಂದ ಪ್ರತ್ಯೇಕವಾದ ಒಬ್ಬ ದೇವನಿರುತ್ತಾನೆ. ಆ ದೇವರು ತನ್ನ ಸಂಕಲ್ಪದ ಮೂಲಕ ಈ ವಿಶ್ವವನ್ನು ಸೃಷ್ಟಿಸುತ್ತಾನೆ. ಈ ದೈವವನ್ನು ದಯಾಮಯನೆಂದು ಚಿತ್ರಿಸಲಾಗಿದೆ. ಆದರೆ, ಇಲ್ಲೊಂದು ಪ್ರಶ್ನೆ. ದೇವರು ದಯಾಮಯನಾದರೆ ಮತ್ತು ಆತನೇ ಜಗತ್ತಿನ ಸೃಷ್ಟಿಕರ್ತನಾದರೆ, ಈ ಜಗತ್ತಿನಲ್ಲಿ ದುಃಖ ತಾರತಮ್ಯಗಳೇಕೆ ಇರಬೇಕು? ಈ ಕಾರಣಕ್ಕಾಗಿ ತಾತ್ತ್ವಿಕರು ಈ ವಾದದಲ್ಲಿ ಅಸಾಂಗತ್ಯಗಳನ್ನು ಕಾಣುತ್ತಾರೆ. ಏಕೆಂದರೆ ಇಲ್ಲಿ ವಿಶ್ವದ ಘಟನೆಗಳನ್ನು ವಿಶ್ವಕ್ಕೆ ಹೊರಗಿನದಾದ ಒಂದು ದೈವದ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಹೀಗೆ ಧರ್ಮಗಳು ವಿಶ್ವಮೂಲವನ್ನು ಬಾಹ್ಯಕ್ಕೆ ಗುರುತಿಸಿದಲ್ಲಿ, ವಿಶ್ವವನ್ನು ಕುರಿತ ಅವುಗಳ ವಿವರಣೆಯು ಅಪೂರ್ಣವಾಗುತ್ತದೆ.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ನಾವು ಹೇಳಬಹುದಾದ ಮತ್ತೊಂದು ಸಂಗತಿಯೆಂದರೆ, **ವಿಕಾಸವಾದ.** ಯಾವುದೇ ವಸ್ತುವು ತನ್ನನ್ನು ತಾನೇ ಉತ್ಪಾದಿಸುತ್ತದೆಂಬುದು ವಿಕಾಸವಾದದ ತಿರುಳು. ಕಾರ್ಯವೆಂಬುದು ಕಾರಣದ ಇನ್ನೊಂದು ರೂಪವಷ್ಟೆ. ಕಾರ್ಯದ ಎಲ್ಲ ಸಾಧ್ಯತೆಗಳು (potentialities) ಕಾರಣದಲ್ಲೇ ಅವ್ಯಕ್ತವಾಗಿ ಅಡಕವಾಗಿವೆ. **'ಸೃಷ್ಟಿ'** ಎನ್ನುವುದು ಅವ್ಯಕ್ತದಿಂದ ವ್ಯಕ್ತಕ್ಕೆ ಉಂಟಾಗುವ ಮಾರ್ಪಾಡೇ ಹೊರತು ಅದರಲ್ಲಿ ಯಾವ ಹೊಸತನವೂ ಇಲ್ಲ. ಎಂದರೆ, ಪ್ರತಿಯೊಂದು ಕಾರ್ಯವೂ ತನ್ನ ಹಿಂದಿನ ಕಾರಣದ ಪುನರುತ್ಪತ್ತಿಯಾಗಿದೆ. ಆದ್ದರಿಂದ ಘಟನೆಯನ್ನು ವಿವರಿಸಲು ನಾವು ಯಾವುದೇ ಹೊರಗಣ ಅಂಶಗಳಿಗೆ ಮೊರೆಹೋಗಬೇಕಿಲ್ಲ. ಘಟನೆಗಳ ಕಾರಣ ಅವುಗಳಲ್ಲೇ ಅಂತಸ್ಥವಾಗಿದೆ. ಆದರೆ, ಈ ಅಂಶವನ್ನು ವಿವರಿಸುವಲ್ಲಿ ಧರ್ಮವು ವಿಫಲವಾಗಿದೆ. ಏಕೆಂದರೆ, ಅದು ವಿಶ್ವವನ್ನು ವಿವರಿಸಲು ವಿಶ್ವಾತೀತವಾದ ದೈವಕ್ಕೆ ಮೊರೆಹೋಗುತ್ತದೆ.

ಈ ಎರಡೂ ಆವಶ್ಯಕತೆಗಳನ್ನು ತೃಪ್ತಿಪಡಿಸುವ ಒಂದು ಧರ್ಮ ಇರಲು ಸಾಧ್ಯವೇ? (ಈ ಎರಡು ಆವಶ್ಯಕತೆಗಳೆಂದರೆ, ಹಿಂದೆ ಹೇಳಿದಂತೆ, ವಿಶೇಷದಿಂದ ಸಾಮಾನ್ಯದತ್ತ ಜ್ಞಾನದ ಹರವನ್ನು ವಿಸ್ತಾರಗೊಳಿಸುವುದು ಮತ್ತು ಯಾವುದೇ ಸಂಗತಿಯ ಕಾರಣವನ್ನು ಆಂತರಿಕವಾಗಿಯೇ ತಿಳಿಯುವುದು.) ವಿವೇಕಾನಂದರ ಪ್ರಕಾರ, ಹೌದು. ಮೊದಲನೆಯದಾಗಿ ವಿಶ್ವದ ಪ್ರತಿಯೊಂದು ವಸ್ತುವೂ ಹೊರಹೊಮ್ಮುವ ಒಂದು ಸಾರ್ವತ್ರಿಕ ತತ್ತ್ವವನ್ನು ನಾವು ಗುರುತಿಸಬೇಕಾಗುತ್ತದೆ. ಈ ತತ್ತ್ವವನ್ನು ನಾವು ವೇದಾಂತದ **'ಬ್ರಹ್ಮನ್'** ಎಂಬ ಪರಿಕಲ್ಪನೆಯಲ್ಲಿ ಕಂಡುಕೊಳ್ಳಬಹುದು. ಏಕೆಂದರೆ, ಇಡೀ ವಿಶ್ವವನ್ನು ಸಮರ್ಪಕವಾಗಿ ವಿವರಿಸಬಲ್ಲ ಅತ್ಯಂತ ವಿಶಾಲವಾದ ಪರಿಕಲ್ಪನೆಯೆಂದರೆ, ಬ್ರಹ್ಮವಸ್ತುವೇ. ಅದು ಶುದ್ಧ, ಸತ್, ಚಿತ್, ಆನಂದ ಮತ್ತು ಅನಂತ ಸ್ವರೂಪವಾಗಿದೆ. ಸತ್ ಅಥವಾ ಅಸ್ತಿತ್ವವು ಮಾನವನ ಮನಸ್ಸು ಪರಿಕಲ್ಪಿಸಿಕೊಳ್ಳಬಹುದಾದ ಅತ್ಯಂತ

ವಿಶಾಲವಾದ ತತ್ತ್ವ. ಅದು ವಿಶ್ವದ ಏಕತೆಯನ್ನು ಜ್ವಲಂತವಾಗಿ ಪ್ರತಿನಿಧಿಸುತ್ತದೆ. ಆಧುನಿಕ ವಿಜ್ಞಾನವು ಏನನ್ನಾದರೂ ಸಾಧಿಸಲು ಹೊರಟಿದ್ದರೆ, ನಾವು ಭೌತಿಕವಾಗಿ, ಮಾನಸಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಒಂದೇ ಎಂಬುದನ್ನು. ಈ ಮೂರು ಅಂಶಗಳಲ್ಲಿ ನಾವು ಭಿನ್ನರಲ್ಲ. ಈ ಅಂಶವನ್ನು ಅದ್ವೈತವು ಈಗಾಗಲೇ ಸ್ಥಾಪಿಸಿದೆ. ವಸ್ತುಗಳ ಏಕತೆಯೇ ಅದ್ವೈತದ ಸಾರ. ಈ ಏಕತಾ ತತ್ತ್ವವು ನಮ್ಮ ಆತ್ಮವಲ್ಲದೇ ಬೇರೇನೂ ಅಲ್ಲ. **'ಆತ್ಮದಲ್ಲಿ ಭಿನ್ನತೆಯನ್ನು ಕಾಣುವವನಿಗೆ ದುಃಖವು ಕಟ್ಟಿಟ್ಟ ಬುತ್ತಿ'** ಎಂಬ ಉಪನಿಷದ್ವಾಣಿಯನ್ನು ವಿವೇಕಾನಂದರು ಪದೇ ಪದೇ ಉಲ್ಲೇಖಿಸುತ್ತಾರೆ.

ಇಡೀ ವಿಶ್ವದ ಒಟ್ಟು ಮೊತ್ತ ಒಂದೇ. ಈ ಏಕತಾ ತತ್ತ್ವವು ಜಡಪ್ರಕೃತಿಯಾಗಿರಲು ಸಾಧ್ಯವಿಲ್ಲ. ಪ್ರಕೃತಿಯೆಂಬುದು ಇದ್ದರೆ, ಅದು ಪಂಚೇಂದ್ರಿಯಗಳ ಮೂಲಕ ಗ್ರಹಿಸಲ್ಪಟ್ಟ ಅಂತಿಮ ಸತ್ಯವಷ್ಟೆ. ಆಧುನಿಕ ಭೌತಶಾಸ್ತ್ರಜ್ಞರು ಸತ್ಯವು ಬಹಳ ಸೂಕ್ಷ್ಮವೆಂಬುದನ್ನು ಒಪ್ಪಿಕೊಳ್ಳುತ್ತಿದ್ದಾರೆ. ಸ್ಥೂಲವು ಕೇವಲ ತೋರಿಕೆಯಷ್ಟೆ. ಹೀಗೆ, ವಿವೇಕಾನಂದರ ಪ್ರಕಾರ ಆಧುನಿಕ ವಿಚಾರವನ್ನು ತೃಪ್ತಿಪಡಿಸುವ ಧರ್ಮವೇನಾದರೂ ಇದ್ದಲ್ಲಿ ಅದು ಅದ್ವೈತವೊಂದೇ. ಅದ್ವೈತ ಎಂಬುದೊಂದು ಅತ್ಯಂತ ವಿಶಾಲವಾದ ಪರಿಕಲ್ಪನೆ. ಅದು ಎಲ್ಲ ಮೂರ್ತರೂಪಗಳನ್ನೂ ಮೀರಿದ್ದು. ಮೂರ್ತವಾಗಿ ಕಾಣುವ ದೇವರು ಈ ವೈಶಾಲ್ಯವನ್ನು ಹೊಂದಿಲ್ಲ. ಏಕೆಂದರೆ ಇಲ್ಲಿ ದೇವರನ್ನು ಕೇವಲ ಒಳ್ಳೆಯವನೆಂದು ಬಿಂಬಿಸಲಾಗಿದೆ. ಆದರೆ ಆತನಿಂದ ಹೊರಹೊಮ್ಮುವ ವಿಶ್ವದಲ್ಲಿ ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ. ಹೀಗೆ ಒಳಿತು, ಕೆಡಕುಗಳ ಸಮನ್ವಯವು ಮೂರ್ತದೇವರ ಪರಿಕಲ್ಪನೆಯಲ್ಲಿ ಸಾಧ್ಯವಿಲ್ಲ. ಆದ್ದರಿಂದ ನಾವು ಮೂರ್ತತೆಯನ್ನು ಮೀರಿ ಆಚೆಗೆ ಹೋಗಬೇಕು. ಅಮೂರ್ತ ಸತ್ಯದಲ್ಲಿ ಒಳಿತು ಕೆಡುಕುಗಳೆಲ್ಲ ಸಮನ್ವಯಗೊಳ್ಳುತ್ತವೆ. ಒಳಿತು ಕೆಡುಕುಗಳು ಇಲ್ಲಿ ಎರಡು ಪ್ರತ್ಯೇಕವಾದ ಅಂಶಗಳಾಗಲು ಸಾಧ್ಯವಿಲ್ಲ. ಅವು ಒಂದೇ ಸತ್ಯದ ಎರಡು ಅಭಿವ್ಯಕ್ತಿಗಳು. ಪ್ರಪಂಚವನ್ನು ಪಂಚೇಂದ್ರಿಯಗಳ ಮೂಲಕ ನೋಡಿದಾಗ ಅದು ಭೌತತತ್ತ್ವವಾಗಿ ಕಾಣುತ್ತದೆ; ಈ ಇಂದ್ರಿಯ ಚೌಕಟ್ಟನ್ನು ಮೀರಿ ನೋಡಿದಾಗ ಅದರ ಚೇತನಾತ್ಮಕ ಆಯಾಮ ನಮಗೆ ಗೋಚರವಾಗುತ್ತದೆ.

ಒಟ್ಟಾರೆ **'ದೇವರು'** ಎನ್ನುವುದು ಮಾನವ ಬುದ್ಧಿಯು ಕಲ್ಪಿಸಿಕೊಳ್ಳಬಹುದಾದ ಅತ್ಯಂತ ಶ್ರೇಷ್ಠ ವಿಶೇಷ (Particular). **'ಬ್ರಹ್ಮ'** ವಾದರೋ ಅತ್ಯಂತ ಶ್ರೇಷ್ಠ ಸಾಮಾನ್ಯ. ವಿವೇಕಾನಂದರ ಪ್ರಕಾರ, ನಿಜವಾದ ಧರ್ಮವೆಂದರೆ ವೇದಾಂತ. ವೇದಾಂತದ ಬ್ರಹ್ಮದ ಪರಿಕಲ್ಪನೆಯಲ್ಲಿ ವೈಚಾರಿಕತೆಯ ಅಂಶಗಳು ಅಡಗಿವೆ. ಬ್ರಹ್ಮದ ಪರಿಕಲ್ಪನೆಯೊಂದೇ ಇಡೀ ವಿಶ್ವವನ್ನು ಸಮರ್ಪಕವಾಗಿ ವಿವರಿಸಬಲ್ಲುದು. ಅದು ಮನುಷ್ಯನ ಆತ್ಮಕ್ಕಿಂತ ಯಾವ ರೀತಿಯಲ್ಲಿಯೂ ಬೇರೆಯಲ್ಲ. ೩೦

---




# ನವಮ ಸ್ಕಂಧ

**ಚ್ಯವನೋಪಾಖ್ಯಾನ:** ವೈವಸ್ವತ ಮನುವು ನೂರು ವರ್ಷ ತಪಸ್ಸು ಮಾಡಿ ತನ್ನಷ್ಟೇ ಸಮರ್ಥರಾದ ಐವರು ಮಕ್ಕಳನ್ನು ಪಡೆದನು. ಅವರಲ್ಲಿ ಶರ್ಯಾತಿಯು ಮಹಾಜ್ಞಾನಿಯಾಗಿದ್ದನು; ವೇದಾಧ್ಯಯನ ಮತ್ತು ಧಾರ್ಮಿಕ ಆಚರಣೆಗಳಲ್ಲಿ ಪ್ರಬುದ್ಧನಾಗಿದ್ದು, ಇತರರಿಗೂ ಮಾದರಿಯಾಗಿದ್ದನು. ಹಾಗೆಯೇ, ಆಂಗೀರಸನು ನಡೆಸುತ್ತಿದ್ದ ಯಜ್ಞಕಾರ್ಯದಲ್ಲಿ ಸಹಾಯಕನಾಗಿದ್ದನು. ಶರ್ಯಾತಿಯು ಋಷಿಮುನಿಗಳ ನಿರ್ದೇಶನದಂತೆ ರಾಜ್ಯಾಡಳಿತ ನಡೆಸುತ್ತಿದ್ದನು. ಇವನಿಗೆ ಸುಕನ್ಯೆ ಎಂಬ ಸುಂದರವಾದ ಮಗಳಿದ್ದಳು. ಆತನಿಗೆ ಅವಳ ಮೇಲೆ ತುಂಬ ವ್ಯಾಮೋಹ. ತಾನು ಹೋದ ಕಡೆಯಲ್ಲೆಲ್ಲಾ ತನ್ನ ಮಗಳನ್ನೂ ತಪ್ಪದೇ ಕರೆದೊಯ್ಯುತ್ತಿದ್ದನು.

ಒಮ್ಮೆ ಶರ್ಯಾತಿಯು ಸೈನಿಕರೊಡಗೂಡಿ ವಿಹಾರಾರ್ಥವಾಗಿ, ಮಗಳನ್ನು ಕರೆದುಕೊಂಡು ಅರಣ್ಯಕ್ಕೆ ಬಂದನು. ಇಲ್ಲಿ ಅವನಿಗೆ ಚ್ಯವನ ಋಷಿಗಳ ಆಶ್ರಮ ಎದುರಾಯಿತು. ಚ್ಯವನ ಋಷಿಗಳು ಮಹಾ ತಪಸ್ವಿಗಳೂ, ಅತ್ಯಂತ ಪೂಜ್ಯರೂ ಆಗಿದ್ದರು. ಅವರ ತಪಸ್ಸಿನ ಪ್ರಭಾವದಿಂದ ಆಶ್ರಮ ಮತ್ತು ಸುತ್ತಲಿನ ಪ್ರದೇಶವೆಲ್ಲ ಪವಿತ್ರವಾಗಿತ್ತು. ಈ ಸುಂದರವಾದ ತಪೋವನವು ಅಧಾರ್ಮಿಕ ಆಚರಣೆಯಿಂದ ಕೆಡಬಾರದೆಂದು ರಾಜನು ಎಲ್ಲರನ್ನೂ ಎಚ್ಚರಿಸಿದನು. ಎಲ್ಲರೂ ಭಯಭಕ್ತಿಗಳಿಂದ ಆಶ್ರಮದ ಸೊಬಗನ್ನು ನೋಡುತ್ತ ಕಾಲ ಕಳೆಯತೊಡಗಿದರು.

ರಾಜನ ಮಗಳಾದ ಸುಕನ್ಯೆಯು ತನ್ನ ಗೆಳತಿಯರೊಂದಿಗೆ ಪುಷ್ಪಲತೆಗಳನ್ನು, ಪಕ್ಷಿಸಂಕುಲಗಳನ್ನು ನೋಡಿ ಆನಂದಿಸುತ್ತ ಆಶ್ರಮದ ಸುತ್ತ ಸುಳಿದಾಡುತ್ತಿದ್ದಳು. ಒಂದು ಮರಕ್ಕೆ ಹೊಂದಿಕೊಂಡಂತೆ ಹುತ್ತವೊಂದು ಬೆಳೆದಿತ್ತು. ಆ ಹುತ್ತಕ್ಕೆ ವೃಕ್ಷದ ವಿಶಾಲವಾದ ರೆಂಬೆಕೊಂಬೆಗಳಲ್ಲಿ ತುಂಬಿದ್ದ ದಟ್ಟವಾದ ಎಲೆಗಳು ನೆರಳನ್ನು ಒದಗಿಸಿ ಸೂರ್ಯನ ಕಿರಣಗಳನ್ನು ಮರೆಮಾಡಿದ್ದವು. ಆ ಹುತ್ತವನ್ನು ಸುಕನ್ಯ ಮತ್ತು ಅವಳ ಗೆಳತಿಯರು ತದೇಕ ದೃಷ್ಟಿಯಿಂದ ನೋಡಿದರು. ಆ ಹುತ್ತದಲ್ಲಿ ಎರಡು ರಂಧ್ರಗಳಿದ್ದವು. ಅವನ್ನು ಗಮನಿಸಿದ ಸುಕನ್ಯೆಯು ಆ ಕಿಂಡಿಗಳಿಂದ ಇಣುಕಿ ನೋಡಿದಳು. ಅಲ್ಲಿಂದ ಪ್ರಕಾಶಮಾನವಾದ ಬೆಳಕು ಬರುತ್ತಿತ್ತು. ಅಲ್ಲೇ ಕೆಳಕ್ಕೆ ಬಿದ್ದಿದ್ದ ಕಡ್ಡಿಯೊಂದನ್ನು ತೆಗೆದುಕೊಂಡು ಎರಡೂ ರಂಧ್ರಗಳಿಗೆ ಚುಚ್ಚಿದಳು. ನಂತರ ಆ ರಂಧ್ರಗಳಿಂದ ಬರುತ್ತಿದ್ದ ಪ್ರಕಾಶವು ನಂದಿತು. ಬದಲಾಗಿ ಅವುಗಳಿಂದ ರಕ್ತವು ಹೊರಬಂದಿತು. ಇದನ್ನು ಕಂಡ ಸುಕನ್ಯೆಯು ಗಾಬರಿಯಾಗಿ ತನ್ನ ಗೆಳತಿಯರೊಂದಿಗೆ ಅಲ್ಲಿಂದ ಹೊರಟು ತಂದೆಯ ಬಳಿಗೆ ಬಂದಳು.

ಸ್ವಲ್ಪಹೊತ್ತಿನಲ್ಲಿ ಸುಕನ್ಯೆ ಮತ್ತು ಅವಳ ಗೆಳತಿಯರಿಗೂ, ಸೈನಿಕರಿಗೂ ಆರೋಗ್ಯದಲ್ಲಿ ವ್ಯತ್ಯಾಸವಾಯಿತು. ರಾಜನು ಗಾಬರಿಯಾದನು. ತಪೋವನದಲ್ಲಿ ಏನೋ ಅಪಚಾರವಾಗಿರಬಹುದು ಎಂದು ಅವನಿಗೆ ಅನ್ನಿಸಿತು. ವಿಚಾರಿಸಿದಾಗ ತನ್ನ ಮಗಳಿಂದಾದ ಅನಾಹುತ ಅವನಿಗೆ ತಿಳಿಯಿತು. ರಾಜನು ಹುತ್ತದ ಸಮೀಪ ಬಂದನು. ಅಲ್ಲಿ ಯಾರೋ ಋಷಿಗಳಿರಬೇಕೆಂದು ತೀರ್ಮಾನಿಸಿದನು. ಕೈಜೋಡಿಸಿ ಅವರನ್ನು ಪ್ರಾರ್ಥಿಸಿ ತನ್ನ ಮಗಳ ತಪ್ಪನ್ನು ಕ್ಷಮಿಸಬೇಕೆಂದು ವಿನಂತಿಸಿದನು.

ಸ್ವಲ್ಪ ಹೊತ್ತಿನಲ್ಲಿ ಹುತ್ತವು ಅಲ್ಲಾಡಿದಂತಾಗಿ ಅಲ್ಲಿಂದ ಚ್ಯವನ ಋಷಿಗಳು ಹೊರಬಂದರು. ಅವರು ಬಹಳ ವೃದ್ಧರಾಗಿದ್ದರು. ಬಿಳಿಗೂದಲು, ಗಡ್ಡ ಮೀಸೆಗಳು ಹುಲುಸಾಗಿ ಬೆಳೆದಿದ್ದವು.

ರಾಜನ ಕ್ಷಮಾಯಾಚನೆಯು ಅವರಿಗೆ ಸಮಾಧಾನ ತರಲಿಲ್ಲ. ಕಣ್ಣುಗಳನ್ನು ಕಳೆದುಕೊಂಡದ್ದು ಅವರ ದೈನಂದಿನ ಧಾರ್ಮಿಕ ಆಚರಣೆಗಳಿಗೆ ಅಡ್ಡಿಯನ್ನು ಉಂಟುಮಾಡಿದ್ದವು. "ರಾಜನ್, ನಾನು ನಿನ್ನನ್ನು ಕ್ಷಮಿಸಬೇಕಾದರೆ, ನನ್ನ ಧಾರ್ಮಿಕ ಅಚರಣೆಗೆ ಅನುವುಮಾಡಿಕೊಡುವ ಸಲುವಾಗಿ, ನಿನ್ನ ಮಗಳಾದ ಸುಕನ್ಯೆಯನ್ನು ನನಗೆ ಲಗ್ನ ಮಾಡಿಕೊಡು" ಎಂಬ ಅಹವಾಲನ್ನು ಅವರು ಮಂಡಿಸಿದರು.

ಈ ವಿಚಾರದ ಪೂರ್ವಾಪರಗಳ ಬಗ್ಗೆ ಸಾಕಷ್ಟು ವಿವೇಚಿಸಿದ ರಾಜನು ತನ್ನ ಮಗಳನ್ನು ಚ್ಯವನ ಋಷಿಗಳಿಗೆ ಧಾರೆ ಎರೆದುಕೊಟ್ಟನು. ಬಹಳ ದುಃಖದಿಂದಲೇ, ತನ್ನ ಪರಿವಾರ ಮತ್ತು ಸೇನೆಯನ್ನು ಕರೆದುಕೊಂಡು ರಾಜಧಾನಿಗೆ ಮರಳಿದನು. ಸುಕನ್ಯೆ ರಾಜಕನ್ಯೆಯಾದರೂ ಧರ್ಮಸೂಕ್ಷ್ಮವನ್ನು ಅರಿತವಳಾಗಿದ್ದಳು. ಪತಿಯೇ ಪ್ರತ್ಯಕ್ಷ ದೇವರೆಂದು ತಿಳಿದು ಅವರ ಸೇವೆ ಮಾಡುತ್ತಿದ್ದಳು. ನಿಷ್ಕಾಮ ಭಕ್ತಿಯಿಂದ ತನ್ನ ಸೇವೆ ಮಾಡುತ್ತಿದ್ದ ಸುಕನ್ಯೆಯನ್ನು ಕಂಡು ಚ್ಯವನ ಋಷಿಗಳಿಗೆ ಸಂತೋಷವಾಗುತ್ತಿತ್ತು. ಅವಳು ಸಂಸಾರಸುಖವನ್ನು ಅನುಭವಿಸಲು ಸಾಧ್ಯವಾಗುತ್ತಿಲ್ಲವಲ್ಲ ಎಂದು ದುಃಖವೂ ಆಗುತ್ತಿತ್ತು. ಹೀಗಿರುವಾಗ ಒಮ್ಮೆ ಅಶ್ವಿನಿ ದೇವತೆಗಳು ಚ್ಯವನ ಋಷಿಗಳ ಆಶ್ರಮಕ್ಕೆ ಬಂದರು. ಚ್ಯವನ ಋಷಿಗಳು ಅವರನ್ನು ಸತ್ಕರಿಸಿ, ಆದರಿಸಿ ಪೂಜಿಸಿದರು. "ದೇವವೈದ್ಯರಾದ ನೀವು ನನಗೆ ದೃಷ್ಟಿ ಮತ್ತು ಯೌವನವನ್ನು ದಯಪಾಲಿಸಬೇಕು" ಎಂದು ವಿನಂತಿಸಿದರು. ಇದಕ್ಕೆ ಪ್ರತಿಯಾಗಿ, ಋಷಿಮುನಿಗಳು ಮಾಡುವ ಯಜ್ಞಯಾಗಾದಿಗಳಲ್ಲಿನ ಹವಿಸ್ಸಿನ ಭಾಗದಲ್ಲಿ ತಮಗೂ ಭಾಗವನ್ನು ಕೊಡಿಸುತ್ತೇನೆಂದು ಹೇಳಿದರು.

ಋಷಿಗಳ ಮಾತಿನಿಂದ ಸಂತಸಗೊಂಡ ಅಶ್ವಿನಿ ದೇವತೆಗಳು, ಅನೇಕ ವನಸ್ಪತಿಗಳ ರಸದಿಂದ ಕೂಡಿದ ಒಂದು ಕೊಳವನ್ನು ನಿರ್ಮಿಸಿದರು. ಅದರಲ್ಲಿ, ಚ್ಯವನ ಋಷಿಗಳೊಂದಿಗೆ ತಾವೂ ಮುಳುಗಿ ಮೇಲೆದ್ದರು. ಮೂವರೂ, ಒಂದೇ ತರಹದ ರೂಪವನ್ನು ಹೊಂದಿದ್ದರು. ಮೂವರು ಕೂಡ ಸುಂದರರಾಗಿಯೂ, ಯುವಕರಾಗಿಯೂ ಇದ್ದರು. ಸುಕನ್ಯೆಗೆ ತನ್ನ ಪತಿ ಯಾರೆಂಬುದು ತಿಳಿಯಲಿಲ್ಲ. ಕಡೆಗೆ ಅಶ್ವಿನಿ ದೇವತೆಗಳನ್ನೇ ಪ್ರಾರ್ಥಿಸಿದಳು. ಆಕೆಯ ಪ್ರಾರ್ಥನೆಗೆ ಒಲಿದು, ಅಶ್ವಿನಿ ದೇವತೆಗಳು ಚ್ಯವನರನ್ನು ಅವಳಿಗೆ ಒಪ್ಪಿಸಿದರು.

ರೂಪಯೌವನಗಳಿಂದ ಕೂಡಿದ ಚ್ಯವನ ಋಷಿಯು ತನ್ನ ಪತ್ನಿಯೊಡನೆ ಸುಖಸಂಸಾರವನ್ನು ಅನುಭವಿಸುತ್ತಿದ್ದರು. ಹೀಗಿರುವಾಗ ಸುಕನ್ಯೆಯ ತಂದೆಯಾದ ಶರ್ಯಾತಿಯು ಯಜ್ಞವೊಂದಕ್ಕೆ ಮಗಳು, ಅಳಿಯನನ್ನು ಕರೆದುಕೊಂಡು ಹೋಗಲು ಆಶ್ರಮಕ್ಕೆ ಬಂದನು. ಮಗಳು ವಯೋವೃದ್ಧನಾದ ಗಂಡನೊಂದಿಗೆ ಇರದೆ ಯಾರೋ ಯುವಕನೊಂದಿಗೆ ಇರುವುದನ್ನು ದೂರದಿಂದಲೇ ಕಂಡು ಅವಳ ಮೇಲೆ ಕ್ರೋಧಗೊಂಡನು. ನಮಸ್ಕರಿಸಿದ ಮಗಳನ್ನು ತಿರಸ್ಕರಿಸಿ ಅವಳನ್ನು ನಿಂದಿಸಿದನು. ಅವನ ಮಾತಿಗೆ ನಕ್ಕ ದಂಪತಿಗಳು ನಿಜ ಸಂಗತಿಯನ್ನು ತಿಳಿಸಿದರು. ರಾಜನೂ ಸಂತಸಗೊಂಡು ತಾನು ನಡೆಸುತ್ತಿದ್ದ ಯಜ್ಞದ ಪೌರೋಹಿತ್ಯವನ್ನು ವಹಿಸಬೇಕೆಂದು ಅಳಿಯನನ್ನು ಕೋರಿದನು. ಚ್ಯವನ ಋಷಿಗಳು ತಾವು ಮಾತು ಕೊಟ್ಟಂತೆ ಅಶ್ವಿನಿ ದೇವತೆಗಳಿಗೂ ಆ ಯಜ್ಞದಲ್ಲಿ ಹವಿಸ್ಸನ್ನು ನೀಡಿದರು. ಹವಿಸ್ಸಿನ ಅಧಿಕಾರ ಇಲ್ಲದ ಅಶ್ವಿನಿ ದೇವತೆಗಳಿಗೆ ನೀಡಿದ ಹವಿರ್ಭಾಗವನ್ನು ತಡೆಯಲು ಇಂದ್ರನು ಬಂದನು. ಚ್ಯವನ ಋಷಿಗಳು ಇಂದ್ರನನ್ನು ತಡೆದರಲ್ಲದೆ, ಉಳಿದೆಲ್ಲ ದೇವತೆಗಳಿಗೂ, ತಾನು ಅಶ್ವಿನಿ ದೇವತೆಗಳಿಗೆ ನೀಡಿದ್ದ ಭರವಸೆಯ ಬಗ್ಗೆ ತಿಳಿಸಿ ಸಮಾಧಾನಪಡಿಸಿದರು; ಅವರೆಲ್ಲರನ್ನೂ ಒಪ್ಪಿಸಿ ಅಶ್ವಿನಿ ದೇವತೆಗಳಿಗೂ ಹವಿಸ್ಸಿನ ಭಾಗವನ್ನು ಕೊಡಿಸಿದರು.

**ನಾಭಾಗ :** ಮನುವಿನ ಪುತ್ರನಾದ ನಭಗನಿಗೆ, ನಾಭಾಗ ಎಂಬ ಹಿರಿಯ ಪುತ್ರನಿದ್ದನು. ಅವನು ಚಿಕ್ಕಂದಿನಿಂದಲೇ ಬ್ರಹ್ಮಚರ್ಯ ವ್ರತ ಹಿಡಿದು ಜ್ಞಾನಾರ್ಜನೆಗಾಗಿ ಗುರುಕುಲಕ್ಕೆ ತೆರಳಿದನು. ಅಲ್ಲಿಯೇ ಬಹುಕಾಲ ಕಳೆಯಿತು, ಆತನಿಗೆ ವಯಸ್ಸಾಯಿತು. ನಾಭಾಗನ ಸಹೋದರರು, ತಂದೆಯ ರಾಜ್ಯವನ್ನು ತಾವೇ ಹಂಚಿಕೊಂಡು ಈತನಿಗೆ ಏನನ್ನೂ ಕೊಡಲಿಲ್ಲ. ರಾಜ್ಯ ಕೇಳಲು ಬಂದ ನಾಭಾಗನಿಗೆ, "ಈಗ ರಾಜ್ಯವನ್ನು ಹಂಚಲು ಬರುವುದಿಲ್ಲ, ಜೀವನಾಧಾರಕ್ಕೆ ನೀನು ನಿನ್ನ ತಂದೆಯನ್ನೇ ಆಶ್ರಯಿಸು" ಎಂದರು.

ನಾಭಾಗನು ತಂದೆಯ ಬಳಿಗೆ ಬಂದು ತನಗಾದ ಅನ್ಯಾಯದ ಬಗ್ಗೆ ನಿವೇದಿಸಿಕೊಂಡನು. ಆಗ ತಂದೆಯಾದ ನಭಗನು ಒಂದು ಉಪಾಯವನ್ನು ಹೇಳಿಕೊಟ್ಟನು: "ಅಂಗೀರಸರು ಕೈಗೊಂಡಿರುವ ಸತ್ರಯಾಗವು ಹನ್ನೆರಡು ದಿನ ನಡೆಯಲಿದೆ. ಅದರಲ್ಲಿ ಆರನೆಯ ದಿನದ ಯಾಗದಲ್ಲಿ ವೈಶ್ವದೇವಕ್ಕೆ ಸಂಬಂಧಪಟ್ಟ ಕರ್ಮಗಳನ್ನು ಸೂಕ್ತ ಮಂತ್ರಗಳ ಪಾರಾಯಣದ ಮೂಲಕ ಮಾಡಬೇಕಿದೆ. ಈ ಮಂತ್ರಗಳು ಅಂಗೀರಸರಿಗೆ ಬರುವುದಿಲ್ಲ. ಆದ್ದರಿಂದ ಯಜ್ಞಕಾರ್ಯವು ಅರ್ಧಕ್ಕೇ ನಿಲ್ಲುವಂತಾಗುತ್ತದೆ. ನಿನಗೆ ಅದು ಬರುವುದರಿಂದ ಆ ಸೂಕ್ತಗಳನ್ನು ನೀನು ಉಚ್ಚರಿಸಿ ಯಜ್ಞಕಾರ್ಯ ಮುಂದುವರಿಸಿದರೆ, ಅವರಿಂದ ನಿನಗೆ ಧನಲಾಭವಾಗುತ್ತದೆ."

ನಾಭಾಗನು ತಂದೆ ಹೇಳಿಕೊಟ್ಟಂತೆಯೇ ಮಾಡಿದನು. ನಾಭಾಗನಿಂದ ಯಜ್ಞಕಾರ್ಯ ಮುಂದುವರಿದಿದ್ದಕ್ಕೆ ಸಂತಸಗೊಂಡ ಅಂಗೀರಸರು, ಯಜ್ಞದಲ್ಲಿ ಉಳಿದ ಶೇಷಭಾಗವನ್ನು ತೆಗೆದುಕೊಳ್ಳುವಂತೆ ಸೂಚಿಸಿ ಹೊರಟುಹೋದರು. ಇನ್ನೇನು, ಯಜ್ಞದಲ್ಲಿ ಉಳಿದಿದ್ದ ಭಾಗವನ್ನು ನಾಭಾಗನು ತೆಗೆದುಕೊಳ್ಳುತ್ತಿದ್ದಾಗ, ಸಾಕ್ಷಾತ್ ರುದ್ರನು ಗೃಹಸ್ಥನ ವೇಷ ತೊಟ್ಟು ಬಂದು, "ಇದೆಲ್ಲವೂ ನನಗೆ ಸೇರಿದ್ದು. ಬೇಕಾದರೆ ನಿನ್ನ ತಂದೆಯನ್ನೇ ಕೇಳಿಕೊಂಡು ಬಾ" ಎಂದು ಹೇಳಿದನು. ನಂತರ ಅವನ ಆದೇಶದಂತೆ ತಂದೆಯ ಬಳಿಗೆ ತೆರಳಿ ಕೇಳಿದಾಗ,

ಆ ವೇಷಧಾರಿಯು ಸಾಕ್ಷಾತ್ ರುದ್ರನೇ ಎಂದು ತಂದೆಯು ತಿಳಿಹೇಳಿದನು. ಇದರಿಂದ ಸಂತಸಗೊಂಡ ನಾಭಾಗನು ಯಾಗಮಂಟಪಕ್ಕೆ ಬಂದು ಭಗವಾನ್ ರುದ್ರನಿಗೆ ಶರಣಾಗತ ನಾಗಿ, ತನ್ನನ್ನು ಕ್ಷಮಿಸಿ ಉದ್ಧರಿಸಬೇಕೆಂದು ಕೇಳಿಕೊಂಡನು. ನಾಭಾಗನ ವಿಷಯದಲ್ಲಿ ಆನಂದಗೊಂಡ ರುದ್ರನು ಅವನಿಗೆ ಬ್ರಹ್ಮಜ್ಞಾನವನ್ನು ಕೊಟ್ಟು ಹರಸಿ ಅಲ್ಲಿಂದ ಅದೃಶ್ಯನಾದನು.

**ಭಕ್ತ ಅಂಬರೀಷ :** ನಾಭಾಗನ ಮಗನೇ ಭಕ್ತ ಅಂಬರೀಷ. ಇವನು ಸಪ್ತದ್ವೀಪಗಳನ್ನು ವಶಪಡಿಸಿಕೊಂಡು ಧರ್ಮದಿಂದ ರಾಜ್ಯವಾಳುತ್ತಿದ್ದನು. ಅಕ್ಷಯವಾದ ಐಶ್ವರ್ಯ ಅಧಿಕಾರ ಎಲ್ಲಾ ಇದ್ದರೂ, 'ಇವೆಲ್ಲ ಶಾಶ್ವತವಲ್ಲ, ಇವು ಕೇವಲ ನೀರಿನ ಮೇಲಿನ ಗುಳ್ಳೆಯಂತೆ' ಎಂದು ಅವನು ಭಾವಿಸಿದ್ದನು. ಯಾವಾಗಲೂ, ಭಗವಂತನಲ್ಲಿ ಮತ್ತು ಆತನ ಭಕ್ತರಲ್ಲಿ ವಿಶ್ವಾಸವಿಟ್ಟು ಎಲ್ಲ ಬಗೆಯ ಧಾರ್ಮಿಕ ವಿಧಿವಿಧಾನಗಳನ್ನೂ ತಪ್ಪದೆ ಪಾಲಿಸು ತ್ತಿದ್ದನು. ಆತನ ಕೈಗಳು ಭಗವಂತನ ಸೇವೆಗಾಗಿಯೇ ಮೀಸ ಲಾಗಿದ್ದವು; ಕಾಲುಗಳು ಭಗವಂತನಿಗೆ ಸಂಬಂಧಪಟ್ಟ ತೀರ್ಥಯಾತ್ರೆಯನ್ನೇ ಮಾಡುತ್ತಿದ್ದವು; ಆತನ ಕಿವಿಗಳು ಭಗವಂತನ ಕೀರ್ತನೆ ಆಲಿಸಲು ಮತ್ತು ಮನಸ್ಸು ಭಗವಂತನ ಸ್ಮರಣೆಗಾಗಿ ಸದಾ ಸಿದ್ಧವಾಗಿತ್ತು. ತಾನು ಮಾಡುತ್ತಿರುವ ಸಕಲ ಕಾರ್ಯಗಳಲ್ಲೆಲ್ಲ ಭಗವಂತನ ಸಾನ್ನಿಧ್ಯವನ್ನೇ ಅವನು ಕಾಣುತ್ತಿದ್ದನು.

ಅಂಬರೀಷನು ಸರಸ್ವತಿ ನದಿ ತೀರದಲ್ಲಿ ಅಶ್ವಮೇಧ ಯಾಗ ಮಾಡಿದ ಸಮಯದಲ್ಲಿ ಯಾಗದ ಹವಿಸ್ಸನ್ನು ಸ್ವೀಕರಿಸಲು, ಇಂದ್ರಾದಿ ದೇವತೆಗಳು ಕಾತರದಿಂದ ಕಾಯುತ್ತಿದ್ದರು. ಪ್ರಜಾ ವತ್ಸಲನಾದ ಅವನು ಪ್ರೀತಿ ಮತ್ತು ಹೃದಯವಂತಿಕೆಗಳಿಂದ ತನ್ನ ಪ್ರಜೆಗಳಲ್ಲಿಯೂ ಹರಿಭಕ್ತಿಯನ್ನು ಮೂಡಿಸುತ್ತಿದ್ದನು.

ಭಗವಂತನನ್ನು ಧ್ಯಾನಿಸಿ, ಪೂಜಿಸಲು ಅನೇಕ ಆಚರಣೆಗಳು, ವ್ರತಗಳು ಇವೆ. ಅವುಗಳಲ್ಲಿ ಏಕಾದಶಿ ವ್ರತವು ಬಹಳ ಪ್ರಮುಖವಾದದ್ದು. ಕಾರ್ತಿಕ ಮಾಸದಲ್ಲೊಮ್ಮೆ ಕೊನೆಯ ದ್ವಾದಶಿ ಬಂದಿತು. ಎಂದಿನಂತೆ ಅಂಬರೀಷನು ಮೂರು ದಿವಸಗಳಿರುವಾಗಲೇ ಉಪವಾಸ ವ್ರತ ಆರಂಭಿಸಿದನು. ನಾಲ್ಕನೆಯ ದಿನ ಅರುಣೋದಯಕ್ಕೆ ಎದ್ದು ಮಧುವನಕ್ಕೆ ತೆರಳಿ ಫಲಪುಷ್ಪಗಳನ್ನು ತಂದು ಶ್ರೀಹರಿಯ ಮೂರ್ತಿಗೆ ಎಲ್ಲ ವಿಧದಿಂದ ಅಲಂಕಾರ ಮಾಡಿ ಪೂಜಿಸಿದನು. ನಂತರ ಬಂದ ಅತಿಥಿಗಳನ್ನು ಸತ್ಕರಿಸಿ ಗೋದಾನ ಮಾಡಿ, ಮೃಷ್ಟಾನ್ನ ಭೋಜನ ಮಾಡಿಸಿದನು. ತಾನು ಇನ್ನೇನು ಭೋಜನಕ್ಕೆ ಕುಳಿತುಕೊಳ್ಳಬೇಕೆನ್ನುವಷ್ಟರಲ್ಲಿ ದೂರ್ವಾಸ ಮುನಿಗಳು ಬಂದರು. ಅಂಬರೀಷನು ಅವರಿಗೂ ಸತ್ಕರಿಸಿ ಭೋಜನಕ್ಕೆ ಆಮಂತ್ರಿಸಿದನು. ಋಷಿಗಳು ಆಹ್ವಾನವನ್ನು ಒಪ್ಪಿಕೊಂಡರು. ಸ್ನಾನ, ಸಂಧ್ಯಾವಂದನೆ ಮುಂತಾದ ನೈಮಿತ್ತಿಕ ಕರ್ಮಗಳನ್ನು ಮುಗಿಸಿಕೊಂಡು ಬರುವುದಾಗಿ ತಿಳಿಸಿ ಯಮುನಾ ನದಿಗೆ ತೆರಳಿದರು.

ದ್ವಾದಶಿಯ ಪ್ರಸಾದ ತೆಗೆದುಕೊಳ್ಳುವ ಸಮಯ ಮೀರಿ ಹೋಗುತ್ತಿತ್ತು. ಸ್ನಾನಕ್ಕೆ ಹೋಗಿದ್ದ ದೂರ್ವಾಸ ಮುನಿಗಳು ಬರಲಿಲ್ಲ. ಸರಿಯಾದ ಸಮಯದಲ್ಲಿ ಭೋಜನ ಮಾಡದಿದ್ದರೆ ವ್ರತವು ನಿಷ್ಫಲವಾಗುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂದು ಅಲ್ಲಿದ್ದ ಪಂಡಿತರನ್ನು ಅಂಬರೀಷನು ಕೇಳಿದನು. ಅವರೆಲ್ಲ ಶಾಸ್ತ್ರದ ಆಧಾರ ತೋರಿಸಿ, ದೇವರಿಗೆ ಅರ್ಪಿಸಿದ ತುಳಸೀದಳ ಮತ್ತು ಪೂಜೆಯ ತೀರ್ಥದ ಸೇವನೆ ಮಾಡಿದರೆ ವ್ರತಭಂಗವಾಗುವುದಿಲ್ಲವೆಂದು ತಿಳಿಸಿದರು. "ಹೀಗೆ ಮಾಡಿದರೆ, ಋಷಿಗಳನ್ನು ಬಿಟ್ಟು ಭೋಜನ ಸ್ವೀಕರಿಸಿದಂತೇನೂ ಆಗುವುದಿಲ್ಲ; ಅವರಿಗೂ ಇದರಿಂದ ಗೌರವ ಕೊಟ್ಟಂತಾಗುತ್ತದೆ" ಎಂದು ಅಭಿಪ್ರಾಯಪಟ್ಟರು. ಅವರೆಲ್ಲರ ಮಾತಿಗೆ ಮನ್ನಣೆ ನೀಡಿದ ಅಂಬರೀಷನು, ತುಳಸಿತೀರ್ಥಗಳನ್ನು ಸೇವಿಸಿ ದೂರ್ವಾಸರಿಗಾಗಿ ಕಾಯುತ್ತಾ ಕುಳಿತನು.

ದೂರ್ವಾಸ ಮುನಿಗಳು ತಮ್ಮ ಪರಿವಾರದೊಂದಿಗೆ ಅಂಬರೀಷನಲ್ಲಿಗೆ ಬಂದರು. ಅವರಿಗೆ ನಡೆದ ವಿಚಾರ ತಿಳಿ ಯಿತು. ಕೋಪಗೊಂಡ ಅವರು, "ಶ್ರೀಹರಿಯ ಶ್ರೇಷ್ಠ ಭಕ್ತನೆಂದು ಕೊಬ್ಬಿನಿಂದ ಮೆರೆಯುತ್ತ ನಮ್ಮನ್ನು ಅವಮಾನಿಸಿದ್ದಕ್ಕೆ ತಕ್ಕ ಫಲವನ್ನು ಅನುಭವಿಸು" ಎಂದು ತಮ್ಮ ಜಡೆಯನ್ನು ನೆಲಕ್ಕೆ ಅಪ್ಪಳಿಸಿದರು. ಕೂಡಲೇ ಭಯಂಕರವಾದ ಶಕ್ತಿಯೊಂದು ಕೈಯಲ್ಲಿ ಖಡ್ಗ ಹಿಡಿದು ಅಂಬರೀಷನನ್ನು ಸಂಹರಿಸಲು ಬಂದಿತು. ಅಂಬರೀಷನು ಕಣ್ಣುಮುಚ್ಚಿಕೊಂಡು ದೇವರ ಧ್ಯಾನದಲ್ಲಿದ್ದನು. ಭಕ್ತ ಅಂಬರೀಷನನ್ನು ಸಂರಕ್ಷಿಸಲು ಶ್ರೀಹರಿಯ ಸುದರ್ಶನ ಚಕ್ರವೇ ಅಡ್ಡ ಬಂದು ದೂರ್ವಾಸರ ಶಕ್ತಿಯನ್ನು ಸಂಹರಿಸಿತು; ಅಷ್ಟೂ ಅಲ್ಲದೆ, ಚಕ್ರವು ದೂರ್ವಾಸರತ್ತಲೇ ರಭಸದಿಂದ ನುಗ್ಗಿತು.

ದೂರ್ವಾಸರು ಹೆದರಿ ಅಲ್ಲಿಂದ ಓಡತೊಡಗಿದರು. ಸಮುದ್ರದಲ್ಲಿ ಮುಳುಗಿದರೂ, ಅಂತರಿಕ್ಷಕ್ಕೆ ಹಾರಿದರೂ, ಬ್ರಹ್ಮನ ಮೊರೆ ಹೋದರೂ, ರುದ್ರನ ಮೊರೆ ಹೋದರೂ ಅದು ಅವರನ್ನು ಬಿಡಲಿಲ್ಲ. ಕಡೆಗೆ ವೈಕುಂಠಕ್ಕೆ ಬಂದು ಅವರು ನಾರಾಯಣನಿಗೆ ಶರಣಾದರು. ಭಗವಂತನು, "ನಾನು ಭಕ್ತರ ಅಧೀನನಾಗಿದ್ದೇನೆ, ನೀನು ನಿನ್ನ ಉಳಿವಿಗಾಗಿ ಅಂಬರೀಷ ನನ್ನೇ ಮೊರೆಹೋಗಬೇಕು" ಎಂದು ಹೇಳಿದನು. ವಿಧಿ ಇಲ್ಲದೆ ದೂರ್ವಾಸ ಮುನಿಗಳು ಅಂಬರೀಷನ ಬಳಿಗೆ ಬಂದು ಶರಣಾದರು. ಅಂಬರೀಷನ ವಿನಯದ ನುಡಿ ಸುದರ್ಶನ ಚಕ್ರವನ್ನು ಶಾಂತಗೊಳಿಸಿತು. ಅಂಬರೀಷ ಮಹಾರಾಜನು ಮತ್ತೊಮ್ಮೆ ಗೌರವದಿಂದಲೇ ದೂರ್ವಾಸರನ್ನು ಸತ್ಕರಿಸಿ, ಆದರಿಸಿ ಅವರಿಗೆ ಭೋಜನ ಮಾಡಿಸಿದನು. ದೂರ್ವಾಸರು ಇದರಿಂದ ಸಂತುಷ್ಟರಾಗಿ, "ನಿನಗೆ ಇಹ ಮತ್ತು ಪರಲೋಕಗಳಲ್ಲಿ ಶಾಶ್ವತ ಸ್ಥಾನ ಸಿಗಲಿ" ಎಂದು ಆಶೀರ್ವದಿಸಿದರು.

ೞ

# ಯಶಸ್ಸಿನ ಮೂರು ಕೀಲಿಕೈಗಳು



ಡಾ. ಡಿ.ಕೆ.ರಾಜೇಂದ್ರ

ಸ್ವಾಮಿ ವಿವೇಕಾನಂದರ ಸಂದೇಶದ ಬೆಳಕಿನಲ್ಲಿ ಯಶಸ್ಸಿನ ಮೂರು ಕೀಲಿಕೈಗಳ ಬಗ್ಗೆ ಸರಳವಾಗಿ ತಿಳಿಸಿಕೊಟ್ಟಿರುವ ಲೇಖಕರು ಕನ್ನಡದ ಹಿರಿಯ ಸಾಹಿತಿಗಳು.

ಯಶಸ್ಸು ಎಲ್ಲರಿಗೂ ಸುಲಭವಾಗಿ ದಕ್ಕುವಂತಹುದಲ್ಲ. ಅದಕ್ಕೆ ತಕ್ಕ ಪ್ರಯತ್ನ ಬೇಕಾಗುತ್ತದೆ. ಇದು ಯಾವುದೇ ಕ್ಷೇತ್ರಕ್ಕಾದರೂ ಅನ್ವಯಿಸುವಂತಹುದು. ಶ್ರಮ ಪಡದೆ ಯಾವ ಗುರಿಯನ್ನು ಮುಟ್ಟಲೂ ಸಾಧ್ಯವಾಗುವುದಿಲ್ಲ. ಸಾಧಕನಿಗೆ ಗುರಿಯಷ್ಟೇ ಅದನ್ನು ಮುಟ್ಟುವ ಮಾರ್ಗವೂ ಮುಖ್ಯವಾಗುತ್ತದೆ. ಅದು ಎಷ್ಟೇ ಕಠಿಣಮಾರ್ಗ ಎನಿಸಿದರೂ ಅದನ್ನು ತಲುಪಲು ನಿಶ್ಚಿತ ಸೂತ್ರಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗುತ್ತದೆ. ಆ ಸೂತ್ರಗಳೇ ಯಶಸ್ಸಿನ ಕೀಲಿಕೈಗಳು. ಅನೇಕರು ತಮ್ಮ ಗುರಿಯಿಂದ ವಿಮುಖರಾಗಿ ನಿರಾಶೆ ಹೊಂದುವುದು ಇಂತಹ ಕೀಲಿಕೈಗಳ ಅಲಭ್ಯತೆಯಿಂದ. ಹಾಗೆ ನೋಡಿದರೆ ಯಾವುದೊಂದು ಕೆಲಸವೂ ಕಷ್ಟವಲ್ಲ, ಕಠಿಣವಲ್ಲ. ಅದು ಹಾಗೆನಿಸುವುದಕ್ಕೆ ಕಾರಣ ನಮ್ಮಲ್ಲಿ ಸರಿಯಾದ ಸಿದ್ಧತೆ ಇಲ್ಲದಿರುವುದು. ಎಷ್ಟೋ ವಿದ್ಯಾರ್ಥಿಗಳು ನಿರಾಶೆ ಹೊಂದುವುದು, ತಮ್ಮ ಕಾರ್ಯದಲ್ಲಿ ವಿಫಲರಾಗುವುದು ಇಂತಹ ಸಿದ್ಧತೆಯ ಕೊರತೆಯಿಂದ.

ಸ್ವಾಮಿ ವಿವೇಕಾನಂದರು ಅಂತಹ ವಿದ್ಯಾರ್ಥಿಗಳಿಗೆ ಗೆಲುವಿನ ಮೂರು ಮಂತ್ರಗಳನ್ನು ನೀಡಿದ್ದಾರೆ: ಅದೇ **ಏಕಾಗ್ರತೆ, ಆತ್ಮವಿಶ್ವಾಸ** ಹಾಗೂ **ಸಚ್ಚಾರಿತ್ರ್ಯ**. ಈ ಮೂರನ್ನು ಜಪವಾಗಿ, ತಪವಾಗಿ ಸ್ವೀಕರಿಸಿದ ಯಾರೇ ಆದರೂ ಜೀವನದಲ್ಲಿ ಯಶಸ್ಸನ್ನು ಸುಲಭವಾಗಿ ಗಳಿಸಲು ಸಾಧ್ಯ ಎಂಬುದು ಅವರ ದೃಢವಾದ ನಿಲುವು. ಇದಕ್ಕೆ ಅವರ ಜೀವನವೇ ಒಂದು ಸ್ಪಷ್ಟ ನಿದರ್ಶನ. ಒಬ್ಬ ದೊಡ್ಡ ಸಾಧಕರಾಗಿ, ಬೋಧಕರಾಗಿ ವಿಶ್ವದ ಜನಮನವನ್ನು ಗೆದ್ದ ಬಹು ದೊಡ್ಡ ಸಾಧಕ ಸ್ವಾಮಿ ವಿವೇಕಾನಂದರು. ಅವರು ತಮ್ಮ ಜೀವನದ ಮೂಲಕ ಸಾರುವ ಮೊದಲ ಮಂತ್ರವೆಂದರೆ ಏಕಾಗ್ರತೆ.

ಹಾಗಾದರೆ ಏಕಾಗ್ರತೆ ಎಂದರೇನು? ಅದನ್ನು ಪಡೆಯುವುದು ಹೇಗೆ? ಸ್ವಾಮೀಜಿ ಅದನ್ನು ನಿದರ್ಶನಗಳ ಮೂಲಕ ಮನಮುಟ್ಟುವಂತೆ ವಿವರಿಸಿದ್ದಾರೆ. "ನೀವು ಯಾವುದೇ ಕೆಲಸವನ್ನು ಮಾಡುವಾಗಲೂ ನಿಮ್ಮ ಮನಸ್ಸು, ಹೃದಯ, ನಿಮ್ಮ ಸರ್ವಸ್ವವನ್ನೂ ಆ ಕೆಲಸಕ್ಕೆ ಕೊಡಿ" ಎಂದು ಹೇಳಿ, ಅದಕ್ಕೆ ಪೂರಕವಾಗಿ ಒಂದು ಉದಾಹರಣೆಯನ್ನು ಕೊಡುತ್ತಾರೆ, "ನಾನೊಮ್ಮೆ ಒಬ್ಬ ಸಾಧು ಮಹಾತ್ಮರನ್ನು ನೋಡಿದ್ದೆ. ಅವರು ಪೂಜಾವಿಧಾನಗಳನ್ನು ಎಷ್ಟು ಏಕಾಗ್ರತೆ, ಶ್ರದ್ಧೆಗಳಿಂದ ಮಾಡುತ್ತಿದ್ದರೋ, ಅಷ್ಟೇ ಸಾವಧಾನದಿಂದ ತಮ್ಮ ಅಡುಗೆ ಮಾಡುವ ಹಿತ್ತಾಳೆ ಪಾತ್ರೆಗಳನ್ನೂ ಫಳಫಳನೆ ಹೊಳೆಯುವ ಚಿನ್ನದಂತೆ ತೊಳೆದಿಡುತ್ತಿದ್ದರು."

ಕೆಲಸದಲ್ಲಿ ಮೇಲು, ಕೀಳು ಎಂಬುದು ಯಾವುದೂ ಇರುವುದಿಲ್ಲ. ಜೀವನದಲ್ಲಿ ಶ್ರದ್ಧೆ, ಏಕಾಗ್ರತೆ ಇವುಗಳನ್ನು ಬೆಳೆಸಿಕೊಂಡರೆ ಯಾವುದೇ ಕೆಲಸವನ್ನು ಸುಲಭವಾಗಿ ಮಾಡಿ ಮುಗಿಸಿ ಯಶಸ್ಸನ್ನು ಕಾಣಲು ಸಾಧ್ಯ. ಏಕಾಗ್ರತೆಯನ್ನು ಹೆಚ್ಚು ಹೆಚ್ಚು ಬೆಳೆಸಿಕೊಂಡಷ್ಟು ಅದರಿಂದ ದೊರೆಯುವ ಲಾಭವೂ ಹೆಚ್ಚಾಗಿರುತ್ತದೆ. ಅದನ್ನೇ ಸ್ವಾಮೀಜಿ, **'ಹೆಚ್ಚು ಏಕಾಗ್ರತೆ, ಹೆಚ್ಚು ಜ್ಞಾನ'** ಎಂದು ಬೋಧಿಸಿದರು. ಜ್ಞಾನಾರ್ಜನೆಗೆ ಇರುವ ಏಕೈಕ ಮಾರ್ಗ ಇದೊಂದೇ ಎಂಬುದು ಅವರ ದೃಢವಾದ ನಿಲುವು. ಒಬ್ಬ ವಿದ್ಯಾರ್ಥಿಯು ಯಶಸ್ವಿಯಾಗಿ ತನ್ನ ಗುರಿಯನ್ನು ತಲುಪಿ ದೊಡ್ಡ ಸಾಧನೆ ಮಾಡಿದನೆಂದರೆ ಅದರ ಹಿಂದಿರುವ ಗುಟ್ಟು ಏಕಾಗ್ರತೆ. ಸ್ವಾಮೀಜಿ ಅದನ್ನೇ ಹೀಗೆ ಒತ್ತಿ ಒತ್ತಿ ಹೇಳುತ್ತಾರೆ: **"ಮಾನಸಿಕ ಶಕ್ತಿಗೆ ಮಿತಿ ಎಂಬುದೇ ಇಲ್ಲ. ಅದು ಯಾವುದೇ ವಿಷಯದ ಮೇಲೆ ಏಕಾಗ್ರವಾದಷ್ಟೂ ಅಲ್ಲಿ ಹೆಚ್ಚು ಶಕ್ತಿ ಕೇಂದ್ರೀಕೃತವಾಗುವುದು. ಇದೇ ಅದರ ರಹಸ್ಯ".**

'ಮನಸ್ಸು ಮಂಗನಂತೆ' ಎಂಬುದು ಹಳೆಯ ಮಾತು. ಅದನ್ನು ನಿಯಂತ್ರಿಸಿ ಹಿಡಿದಿಡುವುದೇ ದೊಡ್ಡ ಸಾಹಸ. ಅದೇ ಸಾಧನೆ. ಅದು ಏಕಾಗ್ರತೆಯಿಂದ ಮಾತ್ರ ಸಾಧ್ಯ. ಹಾಗಾದರೆ ಈ ಏಕಾಗ್ರತೆಯನ್ನು ಬೆಳೆಸಿಕೊಳ್ಳುವುದು ಹೇಗೆ? ಅದಕ್ಕಿರುವ ಉಪಾಯಗಳಾದರೂ ಏನು? ಏಕಾಗ್ರತೆಯ ಸಾಧನೆಗೆ ಬೇಕಾದ ಮೂರು ಮುಖ್ಯ ಅಂಶಗಳನ್ನು ಸ್ವಾಮೀಜಿ ವಿವರಿಸುತ್ತಾರೆ: **ಅಭ್ಯಾಸ, ಆಸಕ್ತಿ, ವೈರಾಗ್ಯ.** ಈ ಮೂರನ್ನು ನಮ್ಮದಾಗಿಸಿಕೊಂಡರೆ ಏಕಾಗ್ರತೆ ತಾನಾಗಿಯೇ ಅದರೊಂದಿಗೆ ಮೂಡಿಬರುತ್ತದೆ.

ಅಭ್ಯಾಸಗಳಲ್ಲಿ ಒಳ್ಳೆಯ ಅಭ್ಯಾಸಗಳಂತೆಯೇ, ಕೆಟ್ಟ ಅಭ್ಯಾಸಗಳೂ ಇರುತ್ತದೆ. ನಾವು ಯಾವುದನ್ನು ಪೋಷಿಸುತ್ತೇವೆಯೋ ಅದು ನಮ್ಮದಾಗುತ್ತದೆ. ಅಭ್ಯಾಸಬಲದಿಂದ ವ್ಯಕ್ತಿ ಏನೆಲ್ಲವನ್ನೂ ಮಾಡಲು ಸಾಧ್ಯ! ಚೆನ್ನಾಗಿ ಓದುವ ಅಭ್ಯಾಸವನ್ನು ಬೆಳೆಸಿಕೊಂಡರೆ ನಮ್ಮ ಜ್ಞಾನ, ಬುದ್ಧಿ – ಎರಡೂ ಚುರುಕಾಗುತ್ತವೆ. ಅಭ್ಯಾಸಕ್ಕೆ ಸಂಬಂಧಿಸಿದಂತೆ ಮಹಾಭಾರತದ ಪ್ರಸಂಗವೊಂದನ್ನು ಉದಾಹರಿಸಬಹುದು: ಒಂದು ರಾತ್ರಿ ಭೀಮಸೇನ ದೀಪದ ಬೆಳಕಿನಲ್ಲಿ ಊಟ ಮಾಡುತ್ತಿದ್ದ. ಗಾಳಿ ಬೀಸಿ ದೀಪ ಆರಿಹೋಯಿತು. ಆದರೆ ಭೀಮ ಊಟ ನಿಲ್ಲಿಸಲೇ ಇಲ್ಲ. ಅಭ್ಯಾಸಬಲದಿಂದ ಅನ್ನದ ತುತ್ತನ್ನು ಹಿಡಿದ ಕೈ ನೇರವಾಗಿ ಬಾಯಿಗೆ ಹೋಗುತ್ತಿತ್ತು. ಇದನ್ನು ನೋಡಿದ

ಅರ್ಜುನನಿಗೆ ಒಂದು ವಿಚಾರ ಹೊಳೆಯಿತು. ಅವನು ಬೆಳಗಿನ ಹೊತ್ತು ಮಾತ್ರ ಬಾಣ ಬಿಡುತ್ತಿದ್ದ. ಅಭ್ಯಾಸ ಮಾಡಿದರೆ ತಾನು ಕತ್ತಲಿನಲ್ಲಿಯೂ ಬಾಣ ಬಿಡಬಹುದಲ್ಲ ಎನ್ನಿಸಿತು ಅವನಿಗೆ! ಅಂದಿನಿಂದ ಪ್ರತಿನಿತ್ಯ ಎಲ್ಲರೂ ಮಲಗಿದ ಮೇಲೆ ತಾನು ಎದ್ದು, ಕತ್ತಲಿನಲ್ಲಿಯೇ ಬಾಣ ಬಿಡುವುದನ್ನು ಅಭ್ಯಾಸ ಮಾಡಿಕೊಂಡ. ಅದರಲ್ಲೂ ನಿಷ್ಣಾತನಾದ.

ಹೀಗೆ ಅಭ್ಯಾಸವು ಏಕಾಗ್ರತೆಗೆ ಸಹಾಯಕವಾಗುತ್ತದೆ. ಧ್ಯಾನ ಕೂಡ ಅಭ್ಯಾಸದ ಫಲವೇ. ಮನಸ್ಸನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳುವುದನ್ನು ಅಭ್ಯಾಸ ಮಾಡಿಕೊಂಡರೆ ಏಕಾಗ್ರತೆ ತಾನಾಗಿ ಸಿದ್ಧಿಸಿದಂತಾಗುತ್ತದೆ.

ಇನ್ನು ಏಕಾಗ್ರತೆಯನ್ನು ಗಳಿಸಲು ಇರುವ ಎರಡನೆಯ ಉಪಾಯ **ಆಸಕ್ತಿ**. ಏಕಾಗ್ರತೆಗೆ ಅಭ್ಯಾಸ ನೆರವಾಗುವಂತೆಯೇ, ಆಸಕ್ತಿಯೂ ಮುಖ್ಯವಾಗುತ್ತದೆ. ಇವೆರಡೂ ಏಕಾಗ್ರತೆಯನ್ನು ಬಲಗೊಳಿಸಲು ಪೂರಕವೂ ಪ್ರೇರಕವೂ ಆದ ಸಾಧನಗಳು. ಅದಕ್ಕಾಗಿ ನಾವು ಮಾಡುವ ಕೆಲಸದ ಬಗ್ಗೆ ಮೊದಲು ಆಸಕ್ತಿಯನ್ನು ಬೆಳೆಸಿಕೊಳ್ಳಬೇಕು. ಆಸಕ್ತಿಯಿಂದ ಕಲಿಯುವ ಯಾವುದೇ ವಿದ್ಯೆಯು ಮನಸ್ಸನ್ನು ಮುಟ್ಟುತ್ತದೆ, ಬುದ್ಧಿಯನ್ನು ಚುರುಕುಗೊಳಿಸುತ್ತದೆ. ಆಸಕ್ತಿ ಎಂದರೆ ಒಂದು ವಿಷಯದ ಬಗ್ಗೆ ತೀವ್ರವಾದ ಪ್ರೀತಿಯನ್ನು ಬೆಳೆಸಿಕೊಳ್ಳುವುದು. ಪ್ರೀತಿಯಿಂದ ಕೈಗೊಳ್ಳುವ ಯಾವುದೇ ಕೆಲಸ ಏಕಾಗ್ರತೆಯಿಂದ ಕೂಡಿರುತ್ತದೆ. ಸ್ವಾಮೀಜಿ ಅದರ ಬಗ್ಗೆ ಹೀಗೆ ಹೇಳುತ್ತಾರೆ: **"ಎಲ್ಲರ ಮನಸ್ಸೂ ಕೆಲವು ಸಮಯ ಏಕಾಗ್ರವಾಗುವುದು. ನಾವು ಪ್ರೀತಿಸುವ ವಸ್ತುವಿನ ಮೇಲೆ ಮನಸ್ಸನ್ನು ಏಕಾಗ್ರಗೊಳಿಸುತ್ತೇವೆ. ಯಾವ ವಸ್ತುವಿನ ಮೇಲೆ ನಮಗೆ ಏಕಾಗ್ರಗೊಳಿಸಲು ಸಾಧ್ಯವಾಗುತ್ತದೆಯೋ ಅದನ್ನು ಪ್ರೀತಿಸಲು ಕಲಿಯುತ್ತೇವೆ."**

ಆಸಕ್ತಿಯಿಂದ ಮಾಡುವ ಕೆಲಸ ಯಾವುದೇ ಆದರೂ ಅದು ಕೈಗೂಡುತ್ತದೆ. ವಿದ್ಯೆ ಕೂಡ ಅದರಿಂದ ಹೊರತಲ್ಲ. ಅಧ್ಯಯನದ ರಹಸ್ಯವನ್ನು ಸ್ವಾಮಿ ವಿವೇಕಾನಂದರು ಸೊಗಸಾಗಿ, ಸರಳವಾಗಿ ಸೂಚಿಸಿದ್ದಾರೆ. ಪರೀಕ್ಷೆಯಲ್ಲಿ ಅಂಕಗಳಿಕೆಗಾಗಿ ಓದುವ ಓದು ನಿಜವಾದ ಓದಲ್ಲ. ನಿಜವಾದ ಓದೆಂದರೆ ಜ್ಞಾನಾರ್ಜನೆಗಾಗಿ ಓದುವುದು, ಕಲಿಯುವಾಗ ಹೊಸತನ್ನು ಅರಿಯಬೇಕೆಂಬ ಆತುರ ಕಾತುರ ಹಂಬಲವನ್ನು ಹೊಂದಿರುವುದು. ಓದುವ ವಿಷಯದ ಬಗ್ಗೆ ಆಸಕ್ತಿ, ಪ್ರೀತಿ, ಸಂತೋಷ ಇದ್ದಾಗ ಒತ್ತಡಕ್ಕೆ ಅವಕಾಶವಿರುವುದಿಲ್ಲ. ಸ್ವಾಮೀಜಿ ಹೇಳುತ್ತಾರೆ, **"ನಮಗೆ ಏನೂ ತಿಳಿದಿಲ್ಲವೆಂದು ಯಾವತ್ತೂ ಅಂದುಕೊಳ್ಳಬಾರದು. ಜ್ಞಾನ ಮನುಷ್ಯನಲ್ಲಿಯೇ ಅಡಗಿರುವುದು. ಜಗತ್ತು ಗಳಿಸಿರುವ ಜ್ಞಾನವೆಲ್ಲವೂ ಮನಸ್ಸಿನಿಂದಲೇ ಬಂದುದು. ಜಗತ್ತಿನ ಅನಂತ ಪುಸ್ತಕ ಭಂಡಾರವೆಲ್ಲ ನಮ್ಮ ಮನಸ್ಸಿನಲ್ಲಿಯೇ ಇದೆ."** ಆದರೆ ಅದನ್ನು ಹೆಕ್ಕಿ ತೆಗೆಯಲು ಏಕಾಗ್ರತೆಯ, ಜ್ಞಾನದ, ಆಸಕ್ತಿ ಶ್ರದ್ಧೆಗಳ ಆವಶ್ಯಕತೆ ಇದೆ.

ಏಕಾಗ್ರತೆಗೆ ಸಂಬಂಧಿಸಿದಂತೆ ಸ್ವಾಮಿ ವಿವೇಕಾನಂದರು ಅಮೆರಿಕದಲ್ಲಿದ್ದಾಗ ನಡೆದ ಘಟನೆಯೊಂದನ್ನು ಇಲ್ಲಿ ಉದಾಹರಿಸಬಹುದು. ಡಾಯ್ಸನ್ ಎಂಬುವವರ ಮನೆಯಲ್ಲಿ ಸ್ವಾಮೀಜಿ ಉಳಿದುಕೊಂಡಿದ್ದರು. ಅಲ್ಲಿ ಒಂದು ಕವನಸಂಗ್ರಹದ ಪುಸ್ತಕವನ್ನು ಓದುತ್ತಿದ್ದರು. ಅದೇ ಸಮಯದಲ್ಲಿ ಡಾಯ್ಸನ್ ಬಂದು ಅವರನ್ನು ಮಾತನಾಡಿಸಿದರು. ಸ್ವಾಮೀಜಿ ಅವರಿಗೆ ಉತ್ತರ ಕೊಡಲೇ ಇಲ್ಲ. ಮತ್ತೆ ಮತ್ತೆ ಮಾತನಾಡಿಸಿದ ನಂತರ ವಷ್ಟೇ ಅವರ ಗಮನ ಡಾಯ್ಸನ್ನರ ಕಡೆಗೆ ಹರಿಯಿತು. ಆಶ್ಚರ್ಯವೆಂದರೆ, ಸ್ವಾಮೀಜಿಯವರು ತಮ್ಮ ಮಾತುಕತೆಯಲ್ಲಿ, ಆಗ ತಾನೇ ಓದುತ್ತಿದ್ದ ಪುಸ್ತಕದಲ್ಲಿ ಇದ್ದ ವಾಕ್ಯಗಳನ್ನು ಹಾಗೆ ಹಾಗೆಯೇ ಹೇಳಲು ಆರಂಭಿಸಿದರು. "ಇದು ಹೇಗೆ ಸಾಧ್ಯ?" ಎಂದು ಡಾಯ್ಸನ್ ಪ್ರಶ್ನಿಸಿದಾಗ ಸ್ವಾಮೀಜಿ ಹೇಳುತ್ತಾರೆ: "ನಾನು ಓದುತ್ತಿರುವಾಗ ನನ್ನ ಮೇಲೆ ಕೆಂಡವನ್ನು ಇಟ್ಟರೂ ಗೊತ್ತಾಗುವುದಿಲ್ಲ. ಹೀಗೆ ತನ್ಮಯತೆಯಿಂದ ಓದುವುದರಿಂದಲೇ ವಿಷಯಗಳನ್ನೆಲ್ಲ ಅಷ್ಟು ಬೇಗ ಗ್ರಹಿಸಲು ಸಾಧ್ಯ." ಏಕಾಗ್ರತೆಯೇ ನಿಜವಾದ ವಿದ್ಯಾಭ್ಯಾಸ ಎಂಬುದು ಸ್ವಾಮಿ ವಿವೇಕಾನಂದರ ಅಭಿಪ್ರಾಯ.

ಏಕಾಗ್ರತೆಯನ್ನು ಸಾಧಿಸಲು ಬೇಕಾದ ಮೂರನೆಯ ಹಾಗೂ ಮುಖ್ಯ ಅಂಶ **ವೈರಾಗ್ಯ**. ವೈರಾಗ್ಯಕ್ಕೂ ಏಕಾಗ್ರತೆಯ ಸಾಧನೆಗೂ ನೇರ ಸಂಬಂಧವಿದೆ. ಸ್ವಾಮೀಜಿ ಹೀಗೆ ಹೇಳುತ್ತಾರೆ: **"ಮನಸ್ಸು ಹೊರಗಿನ ವಸ್ತುಗಳ ವಶವಾಗದಂತೆ ನೋಡಿಕೊಳ್ಳುವುದೇ ವೈರಾಗ್ಯ. ಮನಸ್ಸು ನಮ್ಮ ಸ್ವಾಧೀನಕ್ಕೆ ಒಳಪಟ್ಟಿರಬೇಕು. ನಾವೆಂದೂ ಮನಸ್ಸಿನ ಅಧೀನಕ್ಕೆ ಒಳಪಟ್ಟಿರಬಾರದು. ಇಂಥ ಮಾನಸಿಕ ಶಕ್ತಿಗೆ ವೈರಾಗ್ಯವೆಂದು ಹೆಸರು."**

ಏಕಾಗ್ರತೆಯನ್ನು ಸಾಧಿಸಲು ನಾವು ಎಷ್ಟೋ ತ್ಯಾಗಗಳಿಗೆ ಸಿದ್ಧರಾಗಿರಬೇಕಾತ್ತದೆ. ಅವುಗಳ ಬಗ್ಗೆ ವೈರಾಗ್ಯವನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ನಮ್ಮ ಕಣ್ಣು, ಮನಸ್ಸು, ಬುದ್ಧಿಗಳು ಹೊರಗಿನ ವಸ್ತುವಿಷಯಗಳ ಕಡೆಗೆ ಹರಿದಾಡುತ್ತಿರುತ್ತವೆ. ಇದರಿಂದಾಗಿ ಮನಸ್ಸು ದುರ್ಬಲವಾಗುತ್ತದೆ, ಏಕಾಗ್ರತೆಗೆ ಧಕ್ಕೆಯುಂಟಾಗುತ್ತದೆ. ಇದನ್ನು ಗೆಲ್ಲಲು ಇರುವ ಒಂದೇ ಮಾರ್ಗವೆಂದರೆ ಅಂಥವುಗಳ ಬಗ್ಗೆ ವೈರಾಗ್ಯವನ್ನು ಬೆಳೆಸಿಕೊಳ್ಳುವುದು, ನಿರಾಸಕ್ತಿಯಿಂದ ಕೂಡಿರುವುದು.

ಇನ್ನು ಯಶಸ್ಸಿನ ಎರಡನೆಯ ಮಂತ್ರ **ಆತ್ಮವಿಶ್ವಾಸ**. "ಜೀವನವೆಂದರೇನೇ ಸವಾಲುಗಳ ವಿರುದ್ಧ ಹೋರಾಡುವ ಯುದ್ಧ." ಇದು ಸ್ವಾಮೀಜಿಯವರದೇ ಅವರ ಮಾತು. ಸವಾಲುಗಳನ್ನು ಎದುರಿಸಬೇಕಾದರೆ ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳಬೇಕು. ಅಂತಶ್ಶಕ್ತಿಯೇ ಎಲ್ಲ ಗೆಲುವಿನ ಮೂಲಸೂತ್ರ. ಯಾರೂ ಎಂದೂ ತಮ್ಮನ್ನು ದುರ್ಬಲರೆಂದು ಭಾವಿಸುವ ಅಗತ್ಯವಿಲ್ಲ. "ಇದೊಂದು ದೊಡ್ಡ ಸತ್ಯ. ಶಕ್ತಿಯೇ ಜೀವನ, ದುರ್ಬಲತೆಯೇ ಮರಣ. ಶಕ್ತಿಯೇ ಪರಮಾನಂದ, ಅಖಂಡ ಜೀವನ, ಅಮರತ್ವ. ದುರ್ಬಲತೆಯೇ ಅನವರತ ದುಃಖ, ತಳಮಳ. ದುರ್ಬಲತೆಯೇ ಮರಣ." ಇದಕ್ಕಾಗಿಯೇ ಸ್ವಾಮೀಜಿ ಯುವಕರು ಮೊದಲು ದೈಹಿಕವಾಗಿ ಶಕ್ತಿಸಂಪನ್ನರಾಗಬೇಕೆಂದು ಹೇಳುತ್ತಾರೆ. ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳಲು ಶ್ರದ್ಧೆ ಹಾಗೂ ದೃಢಸಂಕಲ್ಪ ಮುಖ್ಯವಾಗುತ್ತದೆ. ಪ್ರತಿಯೊಬ್ಬರೂ ತಮ್ಮ ತಮ್ಮ ದೇಹಶಕ್ತಿಯ ಅರಿವನ್ನು ಮಾಡಿಕೊಂಡಾಗ ಆತ್ಮವಿಶ್ವಾಸ ಎಚ್ಚರಗೊಳ್ಳುತ್ತದೆ, ಆತ್ಮಶಕ್ತಿ ಹೆಚ್ಚಾಗುತ್ತದೆ, ಗುರಿಸಾಧನೆಗೆ ದಾರಿಯಾಗುತ್ತದೆ.

ಯಶಸ್ಸಿನ ಸಾಧನೆಗೆ ಮುಖ್ಯವಾಗಿ ಬೇಕಾದ ಮತ್ತೊಂದು ಅಂಶವೆಂದರೆ **ಸಚ್ಚಾರಿತ್ರ್ಯ**. ಚಾರಿತ್ರ್ಯದ ಪ್ರಾಮುಖ್ಯತೆಯನ್ನು ಸ್ವಾಮೀಜಿ ಹೀಗೆ ವಿವರಿಸುತ್ತಾರೆ: **"ಹಣ, ಹೆಸರು, ಕೀರ್ತಿ, ವಿದ್ವತ್ತು – ಇದು ಯಾವುದಕ್ಕೂ ಸಹಾಯಕ್ಕೆ ಬರಲಾರವು. ಚಾರಿತ್ರ್ಯ ಮಾತ್ರವೇ ಕಷ್ಟಗಳ ಅಭೇದ್ಯ ಗೋಡೆಗಳನ್ನು ಸೀಳಿ ಹಾಕಬಲ್ಲದು. ಇದನ್ನು ನಿನ್ನ ಮನಸ್ಸಿನಲ್ಲಿ ಇಟ್ಟುಕೋ."** ಚಾರಿತ್ರ್ಯ ಹೀನನಿಗೆ ಎಲ್ಲಿಯೂ ಮನ್ನಣೆ ಇರುವುದಿಲ್ಲ. ಇದ್ದರೂ ಅದು ತಾತ್ಕಾಲಿಕ. ನಿಜವಾದ ಬಣ್ಣ ಬಯಲಾದ ಮೇಲೆ ಆ ವ್ಯಕ್ತಿಯೂ ಬಯಲಿಗೆ ಬರುತ್ತಾನೆ. **"ಉತ್ತಮ ಚಾರಿತ್ರ್ಯದಿಂದ ಉತ್ತಮ ನಡತೆ ಹೊರಹೊಮ್ಮುತ್ತದೆ."** ಒಳ್ಳೆಯ ಆಲೋಚನೆ, ಅಭ್ಯಾಸಗಳ ಮೂಲಕ ನಮ್ಮ ವ್ಯಕ್ತಿತ್ವದಲ್ಲಿ ಒಳ್ಳೆಯ ಸಂಸ್ಕಾರ ಮೈಗೂಡಲು ಸಾಧ್ಯ. ಅಂತಿಮವಾಗಿ ಅದೇ ಸಚ್ಚಾರಿತ್ರ್ಯಕ್ಕೆ ದಾರಿಯಾಗುತ್ತದೆ. ಸಂಸ್ಕಾರಗಳ ಒಟ್ಟು ಮೊತ್ತವೇ ಚಾರಿತ್ರ್ಯ.

ಸ್ವಾಮಿ ವಿವೇಕಾನಂದರು ಹೇಳುವ **ಏಕಾಗ್ರತೆ, ಆತ್ಮವಿಶ್ವಾಸ, ಸಚ್ಚಾರಿತ್ರ್ಯ** – ಈ ಮಂತ್ರಗಳು ವಿದ್ಯಾರ್ಥಿಗಳಿಗಷ್ಟೇ ಸೀಮಿತ ವಾದದ್ದಲ್ಲ. ಗುರಿಸಾಧನೆಗೆ ಹೊರಟ, ಸತ್ಪ್ರಜೆಯಾಗಬೇಕೆಂದು ಆಶಿಸುವ ಪ್ರತಿಯೊಬ್ಬರಿಗೂ ಇದು ಮೂಲಮಂತ್ರಗಳಾಗ ಬಹುದು. ಇದಕ್ಕೆ ಯಾವುದೇ ಎಲ್ಲೆ ಎಂಬುದಿಲ್ಲ. ಯುವಪೀಳಿಗೆ ತಮ್ಮ ಶಕ್ತಿಯನ್ನು ಕಂಡುಕೊಳ್ಳಲು, ಅದನ್ನು ಸಾರ್ಥಕ ರೀತಿ ಯಲ್ಲಿ ಬಳಸಿಕೊಳ್ಳಲು, ಈ ಮೂರು ಮಂತ್ರಗಳನ್ನು ಶ್ರದ್ಧೆ–ಭಕ್ತಿಗಳಿಂದ ಅನುಸರಿಸಬೇಕಾಗುತ್ತದೆ. ಸ್ವಾಮಿ ವಿವೇಕಾನಂದರು 'ಶಕ್ತಿ'ಯಲ್ಲಿ ಬಲವಾದ ನಂಬಿಕೆ ಇಟ್ಟವರು. ಯುವಕರ ಬಗ್ಗೆ ಅಪಾರವಾದ ಭರವಸೆ ಹೊಂದಿದ್ದರು. ಹಾಗಾಗಿ ಮತ್ತೆ ಮತ್ತೆ ಅವರಲ್ಲಿನ ಶಕ್ತಿಯ ಅರಿವನ್ನು ಮಾಡಿಸಿಕೊಡಲು ಸ್ವಾಮೀಜಿ ಹಲವಾರು ರೀತಿಯ ಬೋಧನೆಯನ್ನು ಮಾಡುತ್ತಾರೆ. ದೊಡ್ಡವರಿಂದಲೇ ದೊಡ್ಡ ದೊಡ್ಡ ಕಾರ್ಯಗಳು ಆಗುತ್ತವೆ ಎಂದಲ್ಲ; ಅತಿ ಸಣ್ಣವರೆನಿಕೊಂಡವರಿಂದಲೂ ಮಹತ್ವದ ಕಾರ್ಯಗಳ ಸಾಧನೆಯಾಗಬಹುದು. ಅದನ್ನೂ ನಾವು ಗೌರವಿಸಬೇಕಾಗುತ್ತದೆ. ಸ್ವಾಮಿ ವಿವೇಕಾನಂದರು ಅದನ್ನು ವಿವರಿಸುವುದು ಹೀಗೆ: **"ಮನುಷ್ಯನ ಚಾರಿತ್ರ್ಯವನ್ನು ನೀವು ನಿಜವಾಗಿಯೂ ಪರೀಕ್ಷೆ ಮಾಡಲು ಬಯಸಿದರೆ, ಅವನು ಮಾಡುವ ದೊಡ್ಡ ದೊಡ್ಡ ಕಾರ್ಯಗಳಿಗೆ ಗಮನ ಕೊಡಬೇಡಿ. ಒಬ್ಬ ಹೆಡ್ಡನೂ ಕೂಡ ಯಾವುದಾದರೂ ಒಂದು ಸಮಯದಲ್ಲಿ ಶೂರನಂತೆ ವರ್ತಿಸಬಹುದು. ಮನುಷ್ಯನು ಮಾಡುವ ಸಣ್ಣ ಪುಟ್ಟ ಕಾರ್ಯಗಳನ್ನು ನೋಡಿರಿ. ಅವೇ ದೊಡ್ಡ ಮನುಷ್ಯನ ನಿಜವಾದ ಚಾರಿತ್ರ್ಯವನ್ನು ತಿಳಿಸುವಂಥವು."**

ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಹೇಳುವುದು: "ಶಕ್ತಿ ಎಲ್ಲರಲ್ಲಿಯೂ ಇದೆ; ಆದರೆ ಅದರ ಸದ್ಬಳಕೆ ಎಲ್ಲಿಯೋ ದಾರಿ ತಪ್ಪುತ್ತಿದೆ" ಎಂದು. ಅದನ್ನು ಸರಿಯಾದ ದಾರಿಗೆ ತಂದುಕೊಳ್ಳಲು ಸ್ವಾಮೀಜಿಯವರು ಹೇಳುವ **ಏಕಾಗ್ರತೆ, ಆತ್ಮವಿಶ್ವಾಸ, ಸಚ್ಚಾರಿತ್ರ್ಯ** – ಈ ಮೂರು ದಿವ್ಯ ಮಂತ್ರಗಳಿಗೆ ಮೊರೆಹೋಗುವುದು ಅಗತ್ಯ. ೩

## ಸ್ವಂತ ಗುಣವಿಮರ್ಶೆ

**ಒಬ್ಬ** ಹದಿಹರೆಯದ ಯುವಕ ಒಂದು ಔಷಧದ ಅಂಗಡಿಗೆ ಹೋದ. ಒಂದು ಫೋನ್ ಕರೆ ಮಾಡಲು ಅವಕಾಶ ನೀಡಬೇಕೆಂದು ಅಂಗಡಿಯ ಮಾಲಿಕರನ್ನು ಕೇಳಿಕೊಂಡ. ಅವರು ಅದಕ್ಕೆ ಒಪ್ಪಿದರು. ಹುಡುಗ ಒಂದು ಸಂಖ್ಯೆಗೆ ಕರೆಮಾಡಿ ಮಾತನಾಡಲು ಆರಂಭಿಸಿದ. ಅವನು ಫೋನಿನ ಮೈಕನ್ನು ಆನ್ ಮಾಡಿದ್ದರಿಂದ ಸಂಭಾಷಣೆ ಕೇಳಿಸುತ್ತಿತ್ತು. ಅದನ್ನು ಅಂಗಡಿಯ ಮಾಲಿಕ ಗಮನವಿಟ್ಟು ಕೇಳಿಸಿಕೊಳ್ಳುತ್ತಿದ್ದ.

**ಹುಡುಗ :** ಅಮ್ಮಾವರೇ, ದಯವಿಟ್ಟು ನಿಮ್ಮ ತೋಟದ ಹುಲ್ಲನ್ನು ಕತ್ತರಿಸಿ ಸಮ ಮಾಡುವ ಕೆಲಸ ಕೊಡುತ್ತೀರಾ?

**ಒಡತಿ :** (ಫೋನ್ ಸಂಪರ್ಕದ ಆ ಕಡೆಯಿಂದ) : ಆ ಕೆಲಸಕ್ಕೆ ನಾನೀಗಾಗಲೇ ಒಬ್ಬ ಹುಡುಗನನ್ನು ಇಟ್ಟುಕೊಂಡಿದ್ದೇನಪ್ಪಾ.

**ಹುಡುಗ :** ಅಮ್ಮಾ, ಆ ಹುಡುಗನಿಗೆ ನೀವು ಕೊಡುವ ಅರ್ಧ ಸಂಬಳಕ್ಕೆ ನಾನು ಹುಲ್ಲಿನ ಕೆಲಸ ಮಾಡಿಕೊಡುತ್ತೇನೆ.

**ಒಡತಿ :** ಬೇಡಪ್ಪ. ಈಗ ಇರುವ ಹುಡುಗನೇ ಇರಲಿ. ಅವನು ಚೆನ್ನಾಗಿ ಕೆಲಸ ಮಾಡುತ್ತಾನೆ. ನನಗೆ ಸಮಾಧಾನವಾಗಿದೆ.

**ಹುಡುಗ :** (ಒತ್ತಾಯದ ದನಿಯಲ್ಲಿ) ಅಮ್ಮಾ, ಇದಲ್ಲದೆ ನಾನು ತೋಟದ ದಾರಿಗಳು, ನಿಮ್ಮ ಮನೆಯ ಅಂಗಣ – ಇವೆಲ್ಲವನ್ನು ಗುಡಿಸುವ ಕೆಲಸವನ್ನೂ ಮಾಡಿಕೊಡುತ್ತೇನೆ. ನನಗೇನೂ ಹೆಚ್ಚು ಸಂಬಳ ಬೇಡ. ಭಾನುವಾರದ ಹೊತ್ತಿಗೆ, ನಿಮ್ಮ ಇಡೀ ಮನೆಯ ಅಂಗಣ ಸ್ವಚ್ಛವಾಗಿರುತ್ತದೆ. ಆಗ ಬರುವ ಅತಿಥಿಗಳು ಅದನ್ನು ನೋಡಿ ಮೆಚ್ಚಿಕೊಳ್ಳುತ್ತಾರೆ.

**ಒಡತಿ :** ಬೇಡಪ್ಪಾ. ಈಗಿರುವ ಹುಡುಗನೇ ಚೆನ್ನಾಗಿ ಕೆಲಸ ಮಾಡುತ್ತಾನೆ.

ಹುಡುಗ ನಗುವ ಮುಖದಿಂದ, ಫೋನನ್ನು ಕೆಳಗಿಟ್ಟನು. ಅಂಗಡಿಯ ಮಾಲಿಕ ಇದನ್ನೆಲ್ಲ ಕೇಳುತ್ತಿದ್ದ. ಅವನಿಗೆ ಹುಡುಗನ ಉತ್ಸಾಹವನ್ನು ಕಂಡು ಸಂತೋಷವಾಯಿತು. ತನ್ನ ಅಂಗಡಿಯಲ್ಲಿಯೇ ಕೆಲಸ ಮಾಡುವಂತೆ ಆಹ್ವಾನಿಸಿದ.

**ಅಂಗಡಿ ಒಡೆಯ :** ಮಗೂ, ನಿನ್ನ ನಡತೆ ನನಗೆ ಬಹಳ ಇಷ್ಟವಾಯಿತು. ನಿನ್ನ ಸಕಾರಾತ್ಮಕ ಮನೋಭಾವವನ್ನು ಕಂಡು ತುಂಬ ಖುಷಿಯಾಯಿತು. ನಮ್ಮ ಅಂಗಡಿಯಲ್ಲಿಯೇ ಕೆಲಸ ಮಾಡು.

**ಹುಡುಗ :** ಧನ್ಯವಾದಗಳು, ಸರ್. ನನಗೆ ಕೆಲಸದ ಆವಶ್ಯಕತೆ ಇಲ್ಲ.

**ಅಂಗಡಿ ಒಡೆಯ :** ಆದರೆ ಕೆಲಸ ಬೇಕು ಎಂದು ಫೋನಿನಲ್ಲಿ ಮತ್ತೆ ಮತ್ತೆ ಬೇಡಿಕೊಳ್ಳುತ್ತಿದ್ದೆಯಲ್ಲಾ?

**ಹುಡುಗ :** ಇಲ್ಲ ಸರ್. ಈಗಾಗಲೇ ಕೆಲಸ ಮಾಡುತ್ತಿರುವ ಹುಡುಗ ನಾನೇ. ನನ್ನ ಕೆಲಸದ ಗುಣಮಟ್ಟ ಎಷ್ಟು ಎನ್ನುವುದನ್ನು ನಾನೇ ಪರೀಕ್ಷಿಸಿಕೊಳ್ಳುತ್ತಿದ್ದೆ, ಅಷ್ಟೇ.

**ಇದನ್ನೇ ಸ್ವಂತ ಗುಣವಿಮರ್ಶೆ ಎನ್ನುವುದು. ನಮ್ಮ ವಿಮರ್ಶೆಯನ್ನು ನಾವೇ ಮಾಡಿಕೊಳ್ಳಬೇಕು. ಆಗಲೇ ನಾವು ಬೆಳೆಯಲು ಸಾಧ್ಯ.**

(ಸಾಧಾರ, **'ತತ್ತ್ವಾಲೋಕ'**, ಮಾರ್ಚ್ ೨೦೧೪, ಪು.೩೦)



# ಸ್ವಾಮಿ ವಿವೇಕಾನಂದರು ನಿರೂಪಿಸಿದ ನೀತಿಕಥೆಗಳು



ಡಾ. ಕೆ. ಅನಂತರಾಮು

## ವಿವೇಕಾನಂದರು ಮಾಡಿದ ಭೂತೋಚ್ಚಾಟನೆ

ವ್ಯವಸ್ಥಿತವಾದ ಧ್ಯಾನಾಭ್ಯಾಸದಿಂದ ಮನಸ್ಸು ಏಕಾಗ್ರವಾಗುತ್ತದೆ. ಅದರ ಫಲವಾಗಿ ಕೆಲವು ವಿಶೇಷ ಶಕ್ತಿಗಳು ಸಾಧಕನ ಕೈವಶವಾಗುತ್ತವೆ. ಅದನ್ನೇ 'ಸಿದ್ಧಿ' ಎಂದು ಕರೆಯುತ್ತಾರೆ. ಅಂತಹ ಸಿದ್ಧಿಗಳಿಂದ ಬೇರೆಯವರ ಕಾಯಿಲೆಗಳನ್ನು ಗುಣಪಡಿಸಬಹುದು; ಬೇರೆಯವರ ಮನಸ್ಸಿನ ಮೇಲೆ ಪ್ರಭಾವ ಬೀರಬಹುದು. ಆದರೆ ಆ ಸಿದ್ಧಿಗಳನ್ನು ಸಂಗ್ರಹಿಸಿಟ್ಟುಕೊಳ್ಳುವ ತಾಳ್ಮೆಯಿರಬೇಕು. ಕೆಲವರು ತಾಳ್ಮೆಯಿಲ್ಲದೆ, ದೂರದೃಷ್ಟಿಯಿಲ್ಲದೆ, ಸಿದ್ಧಿಗಳನ್ನು ಸಂಗ್ರಹಿಸಿಕೊಳ್ಳುವುದಕ್ಕೆ ಮುನ್ನವೇ ಅವುಗಳನ್ನು ಹಂಚಲು, ಪ್ರದರ್ಶಿಸಲು ಪ್ರಾರಂಭಿಸಿಬಿಡುತ್ತಾರೆ. ಸಿದ್ಧಿಗಳನ್ನು ಸಂಗ್ರಹಿಸಲು ಬಹಳ ಕಾಲ ಹಿಡಿಯುತ್ತದೆ. ಆದರೆ 'ಕುಂಬಾರನಿಗೊಂದು ವರ್ಷ, ದೊಣ್ಣೆಗೊಂದು ನಿಮಿಷ' ಎಂಬಂತೆ ಖರ್ಚುಮಾಡಲು ಒಂದು ಕ್ಷಣಕಾಲ ಸಾಕು. ಕೆಲವರು ಯಾವ ಪೂರ್ವಸಿದ್ಧತೆಯೂ ಇಲ್ಲದೆ ಕೆಲವು ಸಿದ್ಧಿಗಳನ್ನು ಅಯಾಚಿತವಾಗಿ, ಅಕಸ್ಮಾತ್ತಾಗಿ ಪಡೆದುಕೊಂಡಿರುವ ಉದಾಹರಣೆಗಳೂ ಇವೆ.

ಒಂದು ದಿನ ಸ್ವಾಮಿ ವಿವೇಕಾನಂದರು ತಮ್ಮ ಶಿಷ್ಯ ಬಾಬು ಶರತ್‌ಚಂದ್ರ ಚಕ್ರವರ್ತಿ ಮತ್ತು ಇತರರೊಡನೆ ಕೂಡಿ ಕೊಲ್ಕೊತ್ತೆಯ ಬಲರಾಮಬಸು ಅವರ ಮನೆಯಲ್ಲಿ ಸದ್ವಿಚಾರಗಳನ್ನು ಮಥನಮಾಡುತ್ತಿದ್ದರು. ಆ ಹೊತ್ತಿನಲ್ಲಿ ವಿವೇಕಾನಂದರು, "ಸಿದ್ಧಿ ಅಥವಾ ಅದ್ಭುತ ಕಾರ್ಯಗಳನ್ನು ಮಾಡುವ ಶಕ್ತಿಯನ್ನು ಅತಿ ಸಾಮಾನ್ಯವಾದ ಚಿತ್ತಸಂಯಮದಿಂದಲೇ ಪಡೆದುಕೊಳ್ಳಬಹುದು. ಮತ್ತೊಬ್ಬರ ಮನಸ್ಸಿನಲ್ಲಿರುವುದನ್ನು ತಿಳಿಯುವ ವಿದ್ಯೆಯನ್ನು ನಿನಗೆ ನಾಲ್ಕಾರು ದಿನಗಳಲ್ಲಿಯೇ ಬೇಕಾದರೆ ಕಲಿಸಿಕೊಡಬಲ್ಲೆ" ಎಂದು ಶರತ್‌ಚಂದ್ರರನ್ನು ಕುರಿತು ಹೇಳಿದರು. ಆಗ ಶರತ್‌ಚಂದ್ರರು, "ಆ ವಿದ್ಯೆಯನ್ನು ಕಲಿಯುವದರಿಂದ ಬ್ರಹ್ಮಜ್ಞಾನಕ್ಕೆ ಏನಾದರೂ ಸಹಾಯ ಒದಗಿಬರುತ್ತದೆಯೇ ಮಹಾರಾಜ್" ಎಂದು ಕೇಳಿದರು. ಸ್ವಾಮಿಗಳು "ಸ್ವಲ್ಪವೂ ಇಲ್ಲ" ಎಂದರು. ಆಗ ಶರತ್‌ಚಂದ್ರರು, "ಹಾಗಾದರೆ ನನಗೇನೂ ಆ ವಿದ್ಯೆ ಬೇಡ. ಆದರೆ ಆ ಸಿದ್ಧಿಯ ಸಂಬಂಧವಾಗಿ ತಾವು ಯಾವುದನ್ನು ಪ್ರತ್ಯಕ್ಷ ಮಾಡಿಕೊಂಡಿದ್ದೀರಿ ಅಥವಾ ಯಾವುದನ್ನು ನೋಡಿದ್ದೀರಿ ಎಂಬುದನ್ನು ಹೇಳಿ. ಅದನ್ನು ಕೇಳುವ ಆಸೆ ನನ್ನಲ್ಲಿ ಕುಡಿಯೊಡೆದಿದೆ" ಎಂದು ಗಂಟುಬಿದ್ದರು. ಆಗ ವಿವೇಕಾನಂದರು ನಿರೂಪಿಸಿದ ವೃತ್ತಾಂತ ಪರಮಾಶ್ಚರ್ಯಕರವೂ ಪರಮಾದ್ಭುತವೂ ಆಗಿತ್ತು.

ಒಂದು ಸಲ ಸ್ವಾಮಿ ವಿವೇಕಾನಂದರು ಹಿಮಾಚಲ ಪ್ರದೇಶದಲ್ಲಿ ಯಾತ್ರೆಮಾಡುತ್ತಾ ಒಂದು ರಾತ್ರಿಯ ಮಟ್ಟಿಗೆ ಒಂದು ಪರ್ವತಗ್ರಾಮದಲ್ಲಿ ತಂಗಿದ್ದರು. ಗೃಹಸ್ಥನೊಬ್ಬನು ಅವರಿಗೆ ಆಶ್ರಯ ನೀಡಿ ತನ್ನ ಗುಡಿಸಿಲಿನಲ್ಲಿ ಇರಿಸಿಕೊಂಡಿದ್ದನು. ರಾತ್ರಿಯಾಗುತ್ತಿದ್ದಂತೆಯೇ, ಆ ಗ್ರಾಮದಲ್ಲಿ ಮದ್ದಳೆಬಾರಿಸುವ ಸದ್ದು ಕೇಳಿಸಿತು. ಸ್ವಾಮಿಗಳು ಆ ಗೃಹಸ್ಥನನ್ನು, "ಮದ್ದಳೆ ಬಾರಿಸುತ್ತಿರುವವರು ಯಾರು?" ಎಂದು ಕೇಳಿದರು. ಆಗ ಗೃಹಸ್ಥನು "ನಮ್ಮೂರಿನಲ್ಲಿ ಬಹಳ ಕಾಲದಿಂದ ಒಬ್ಬನನ್ನು ದೆವ್ವ ಮೆಟ್ಟಿಕೊಂಡಿದೆ. ಅದು ಕೆರಳಿದಾಗ ಮದ್ದಳೆ ಬಡಿಯುವುದು ಮುಂತಾದ ಏನೇನೋ ನಡೆಯುತ್ತವೆ. ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ, ನೋಡುತ್ತೀರಂತೆ ಬನ್ನಿ" ಎಂದು ಗೌರವದಿಂದ ಹೇಳಿದನು. ಗೃಹಸ್ಥನ ವಿನಂತಿಯನ್ನು ಪೋಷಿಸಿದಂತೆಯೂ ಆಯಿತು, ತಮ್ಮ ಮನಸ್ಸಿನ ಅದಮ್ಯ ಕುತೂಹಲವನ್ನು ತಣಿಸಿಕೊಂಡಂತೆಯೂ ಆಯಿತು ಎಂಬ ದ್ವಿವಿಧೋದ್ದೇಶದಿಂದ ವಿವೇಕಾನಂದರು ಆ ಗೃಹಸ್ಥನೊಡನೆ ಅಲ್ಲಿಗೆ ಹೋದರು.

ಅಲ್ಲಿ ಹೋಗಿ ನೋಡುವಾಗ ಆಗಲೇ ಗ್ರಾಮಸ್ಥರು ಗುಂಪು ಕೂಡಿದ್ದರು. ಗುಂಗುರುಕೂದಲು ತಲೆಯ, ಎತ್ತರವಾದ ನಿಲುವಿನ ಪರ್ವತವಾಸಿಯನ್ನು ಆ ಗೃಹಸ್ಥನು ತೋರಿಸುತ್ತ, "ನೋಡಿ ಸ್ವಾಮಿ, ಅವನ ಮೇಲೆಯೇ ದೆವ್ವ ಬಂದಿರುವುದು" ಎಂದು ಹೇಳಿದನು.

ವಿವೇಕಾನಂದರು ಎಲ್ಲವನ್ನೂ ಮಿಕಿಮಿಕಿ ನೋಡುತ್ತಿದ್ದರು. ದೆವ್ವ ಮೆಟ್ಟಿಕೊಂಡವನ ಸಮೀಪದಲ್ಲಿಯೇ ಕಬ್ಬಿಣದ ಕೊಡಲಿಯೊಂದನ್ನು ಬೆಂಕಿಯಲ್ಲಿಟ್ಟು ಕಾಯಿಸುತ್ತಿದ್ದರು. ಅದು ಥಳಗುಟ್ಟುವಂತೆ ಕಾದು ಕೆಂಪಾದ ಮೇಲೆ, ಉಪಾಯವಾಗಿ ಮೇಲೆತ್ತಿ, ದೆವ್ವ ಬಡಿದವನ ಮೈಗೆಲ್ಲಾ ಒತ್ತುತ್ತಿದ್ದರು. ತಲೆಗೂ ಆಗಾಗ ತಿವಿಯುತ್ತಿದ್ದರು. ಭೂತವನ್ನೋಡಿಸಲು ಅಂತಹ 'ರಣಚಿಕಿತ್ಸೆ'ಯನ್ನು ಅವರು ಕೈಗೊಂಡಿರಬೇಕು. ಹಾಗೆ ಮಾಡಿದರೂ ಆ ಗರಬಡಿದ ಪುರುಷನ ಶರೀರವೂ ಸುಡಲಿಲ್ಲ, ಅವನ ಒಂದು ಕೂದಲೂ ಕೊಂಕಲಿಲ್ಲ. ನೋವನ್ನು ತೋರಿಸುವ ಯಾವ ಚಿಹ್ನೆಯೂ ಅವನ ಮುಖದಲ್ಲಿ ಕಾಣಿಸುತ್ತಿರಲಿಲ್ಲ. ಭೂತವೇ ಅದನ್ನೆಲ್ಲಾ ನುಂಗಿಕೊಳ್ಳುತಿತ್ತೋ ಏನೋ! ಅದನ್ನು ನೋಡುತ್ತ ನೋಡುತ್ತ ವಿವೇಕಾನಂದರು ಅವರ್ಣನೀಯವಾದ ಸೋಜಿಗದಲ್ಲಿ ಮುಳುಗಿಹೋದರು.

ಆ ಜನರ ಗುಂಪಿನಲ್ಲಿ ಗ್ರಾಮದ ಯಜಮಾನನೂ ಇದ್ದನು. ಅವನು ವಿವೇಕಾನಂದರನ್ನು ಸಮೀಪಿಸಿ ಅಡ್ಡಬಿದ್ದು, "ಮಹಾರಾಜ್, ನೀವು ಮಹಾತ್ಮರು, ನಮ್ಮ ಪುಣ್ಯವಶದಿಂದ ನಮ್ಮ ಹಳ್ಳಿಗೆ ಬಂದಿದ್ದೀರಿ. ಈತನನ್ನು ಬಹಳ ಕಾಲದಿಂದ ಕಾಡುತ್ತಿರುವ ದೆವ್ವವನ್ನು ನೀವು ಬಿಡಿಸಿಕೊಡಬೇಕು" ಎಂದು ವಿನಯದಿಂದ ಬೇಡಿಕೊಂಡನು. ವಿವೇಕಾನಂದರು ಕ್ಷಣಕಾಲ ಗಲಿಬಿಲಿಗೊಂಡರು. ಏನೊಂದೂ ತೋಚದೆ ಮೌನವಾಗಿ, ಭಾವಮಯರಾಗಿ ನಿಂತರು. ಆಗ ಗ್ರಾಮದ ಮಿಕ್ಕವರೂ ಸ್ವಾಮಿಗಳಿಗೆ ಅಡ್ಡಬಿದ್ದು, "ಬಿಡಿಸಿಕೊಡಿ ಮಹಾರಾಜ್" ಎಂದು ಅಂಗಲಾಚಿದರು.

ಅನ್ಯಮಾರ್ಗವಿಲ್ಲದೆ ವಿವೇಕಾನಂದರು ಮೆಲ್ಲಮೆಲ್ಲನೆ ಆ ಭೂತಬಡಿದವನ ಸಮೀಪಕ್ಕೆ ಹೋದರು. "ಇದೇನು ಸುಳ್ಳೋ ನಿಜವೋ, ಮೊದಲು ಕೊಡಲಿಯನ್ನು ಪರೀಕ್ಷಿಸೋಣ" ಎಂದು ಅದನ್ನು ಕೈಗೆತ್ತಿಕೊಂಡರು. ಅಷ್ಟುಹೊತ್ತಿಗೆ ಅದು ಕೆಂಪುಬಣ್ಣದಿಂದ ತನಗೆ ಸಹಜವಾದ ಕಪ್ಪುಬಣ್ಣಕ್ಕೆ ತಿರುಗಿತ್ತು. ಆದರೂ ಅದರ ಉಗ್ರವಾದ ಬಿಸಿಯಿಂದ ವಿವೇಕಾನಂದರ ಕೈ ಸುಟ್ಟುಹೋಯಿತು. ಅದರಿಂದುಂಟಾದ ಉರಿಯಿಂದ ವಿವೇಕಾನಂದರು ತತ್ತರಿಸಿಹೋದರು. "ಅದು ಹಾಗಿರಬಹುದು, ಇದು ಹೀಗಿರಬಹುದು" ಎಂಬ ತರ್ಕವಿತರ್ಕಗಳೆಲ್ಲ ಹಾರಿಹೋದವು. ತಮ್ಮ ಕೈ ಉರಿಯಿಂದ ಬೇಯುತ್ತಿದ್ದರೂ ಅದನ್ನು ತೋರಗೊಡದೆ, ಅದೇ ಕೈಯನ್ನು ಆ ದೆವ್ವಮೆಟ್ಟಿಕೊಂಡ ಮನುಷ್ಯನ ತಲೆಯ ಮೇಲಿಟ್ಟು ಸ್ವಲ್ಪಹೊತ್ತು ಏಕಾಗ್ರಚಿತ್ತರಾಗಿ ಜಪಮಾಡಿದರು. ಆಗ ವಿವೇಕಾನಂದರ ಏಕಾಗ್ರತೆ ಎಷ್ಟಿತ್ತೆಂದರೆ ಅವರ ಕೈಯುರಿ ಮರೆಯಾಗಿಬಿಟ್ಟಿತು. ಹತ್ತುನಿಮಿಷಗಳು ಕಳೆಯುವುದರಲ್ಲಿಯೇ ಭೂತಬಾಧೆಗೆ ತುತ್ತಾಗಿದ್ದ ಆ ಮನುಷ್ಯನು, ಭೂತಮುಕ್ತನಾಗಿ ಎಲ್ಲರಂತೆ ಚೆನ್ನಾಗಿಬಿಟ್ಟನು. ಮೇಲೆದ್ದು ಬಂದು ಸ್ವಾಮಿಗಳ ಕಾಲಿಗೆರಗಿದನು.

ಆ ಹೊತ್ತಿನಲ್ಲಿ ಗ್ರಾಮಮುಖಂಡನೇ ಆದಿಯಾಗಿ ಅವರೆಲ್ಲರೂ ವಿವೇಕಾನಂದರ ವಿಷಯದಲ್ಲಿ ತೋರಿಸಿದ ಭಕ್ತಿಗೌರವಗಳು ಅಪೂರ್ವವಾಗಿದ್ದವು. "ಭೂತೋಚ್ಚಾಟನೆ ಮಾಡಲೆಂದೇ ಭಗವಂತನು ಈ ಮಹಾಪುರುಷರನ್ನು ನಮ್ಮೂರಿಗೆ ಕಳುಹಿಸಿದ್ದಾನೆ" ಎಂದು ಕೊಂಡಾಡುತ್ತಾ ಎಲ್ಲರೂ ನಮಸ್ಕರಿಸಿದರು. ಅಷ್ಟೆಲ್ಲಾ ಆಗುವ ಹೊತ್ತಿಗೆ ನಡುರಾತ್ರಿಯಾಯಿತು. ವಿವೇಕಾನಂದರು ಆ ಗೃಹಸ್ಥನೊಡನೆ ಆತನ ಗುಡಿಸಿಲಿಗೆ ಬಂದು ಮಲಗಿದರು. ಕೈಯುರಿ ಒಂದುಕಡೆ, ಆ ಘಟನೆಯ ಒಳಹೊರಗುಗಳನ್ನು ಸ್ವಲ್ಪವೂ ಭೇದಿಸಲಾರದೆ ಹೋದೆನಲ್ಲಾ ಎಂಬ ತಳಮಳ ಮತ್ತೊಂದು ಕಡೆ. ಹೀಗಾಗಿ ಅವರಿಗೆ ಮಲಗಿದರೂ ಕಣ್ಣರೆಪ್ಪೆ ಕೂಡಲೇ ಇಲ್ಲ. ಗಣಗಣನೆ ಉರಿಯುತ್ತಿರುವ ಕೊಡಲಿಯಿಂದ ಮನುಷ್ಯ ದೇಹವನ್ನು ತಿವಿದರೂ ಅದು ಸುಟ್ಟುಹೋಗದಿರುವುದೆಂದರೇನು, ಅದು ಪ್ರಕೃತಿವಿರುದ್ಧವಲ್ಲವೇ ಎಂಬ ಪ್ರಶ್ನೆ ಕಾಡತೊಡಗಿತು. "ಇಂತಹ ವಿಚಿತ್ರ ಘಟನೆಗಳು ಭೂಲೋಕದಲ್ಲಾಗಲಿ, ಸ್ವರ್ಗಲೋಕದಲ್ಲಾಗಲಿ ಬೇಕಾದಷ್ಟಿರಬಹುದು. ಆದರೆ ನಮ್ಮ ಧರ್ಮಶಾಸ್ತ್ರಗ್ರಂಥಗಳು ತಮ್ಮ ಸ್ವಪ್ನದಲ್ಲಿಯೂ ಅಂಥವನ್ನು ಕಂಡಿರಲಾರವು" ಎಂಬ ಮಾತೊಂದು ವಿವೇಕಾನಂದರ ಮನದಲ್ಲಿ ಆಗ ಅನುರಣಿಸುತ್ತಿತ್ತು. ಈ ಘಟನೆಯ ರಹಸ್ಯವು ವಿವೇಕಾನಂದರಿಗೇ ಅರ್ಥವಾಗಲಿಲ್ಲವೆಂದ ಮೇಲೆ ನಾವು ಏನು ತಾನೆ ಅರ್ಥಮಾಡಿಕೊಂಡೇವು?

ಈ ಘಟನೆಯನ್ನು ಆಲಿಸಿದ ಬಳಿಕ ಶರತ್‌ಚಂದ್ರರು, "ಆಮೇಲೇನಾದರೂ ಈ ವಿಷಯದಲ್ಲಿ ಚಿಂತಿಸಿ ಇತ್ಯರ್ಥ ಮಾಡುವುದಕ್ಕೆ ತಮಗೆ ಸಾಧ್ಯವಾಯಿತೇ, ಮಹಾರಾಜ್" ಎಂದು ಕೇಳಿದರು. ಸ್ವಾಮಿಗಳು "ಇಲ್ಲ, ಸಾಧ್ಯವಾಗಲಿಲ್ಲ" ಎಂದು ಉತ್ತರಿಸಿದರು. ಈ ಸಂದರ್ಭದಲ್ಲಿ ಭೂತೋಚ್ಚಾಟನೆ ಮಾಡಿದ ವಿವೇಕಾನಂದರ ಸಿದ್ಧಿಯ ರಹಸ್ಯವನ್ನು ಮನಗಾಣಬೇಕಾಗಿದೆ. ಆದರೆ ಅಂತಹ ಸಿದ್ಧಿಗಳ ಕಡೆಗೆ ಅವರು ಗಮನಕೊಡಲಿಲ್ಲ ಎಂಬುದನ್ನೂ ಮನವರಿಕೆ ಮಾಡಿಕೊಳ್ಳಬೇಕಾಗಿದೆ.

"ಪರಮಹಂಸರು ಸಿದ್ಧಿಗಳನ್ನು ತುಂಬ ಹಳಿಯುತ್ತಿದ್ದರು. ಇವೆಲ್ಲವೂ ಶಕ್ತಿಗಳನ್ನು ತೋರಿಸುವುದರ ಕಡೆಗೆ ಮನಸ್ಸನ್ನು ಸೆಳೆದು ಪರಮಾತ್ಮ ತತ್ತ್ವವನ್ನು ಪಡೆಯುವುದಕ್ಕೆ ಅವಕಾಶ ಕೊಡುವುದಿಲ್ಲ ಎಂದು ಹೇಳುತ್ತಿದ್ದರು. ಆದರೆ ಮನುಷ್ಯನ ಮನಸ್ಸು ಎಷ್ಟು ದುರ್ಬಲವಾದುದೆಂದರೆ, ಸಂಸಾರಿಗಳ ಮಾತಿರಲಿ, ಸಾಧುಗಳಲ್ಲಿಯೂ ಶೇಕಡಾ ತೊಂಬತ್ತರಷ್ಟು ಜನರು ಸಿದ್ಧಿಯ ಉಪಾಸಕರಾಗಿ ಪರಿಣಮಿಸುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿಯೂ ಈ ವಿಧವಾದ ಇಂದ್ರಜಾಲವನ್ನು ನೋಡಿದರೆ ಜನರು ಬೆರಗಾಗುತ್ತಾರೆ. ಸಿದ್ಧಿಗಳನ್ನು ಪಡೆಯುವುದು ಹೇಯವಾದುದು, ಧರ್ಮಮಾರ್ಗಕ್ಕೆ ವಿಘ್ನಕಾರಿ ಎಂಬ ವಿಷಯವನ್ನು ಪರಮಹಂಸರು ಕೃಪೆಮಾಡಿ ತಿಳಿಸಿಕೊಟ್ಟು ಹೋಗಿರುವುದರಿಂದ ಅದು ನನಗೆ ಗೊತ್ತಿದೆ. ಹೀಗಾಗಿ ಪರಮಹಂಸರ ಶಿಷ್ಯರಾರೂ ಈ ಸಿದ್ಧಿಯ ವಿಷಯದಲ್ಲಿ ಆಸೆಯಿಟ್ಟುಕೊಂಡಿಲ್ಲ" ಎಂದು ಈ ವೃತ್ತಾಂತದ ಕೊನೆಯಲ್ಲಿ ಬೋಧಿಸಿದ್ದಾರೆ.

ಅಷ್ಟುಮಾತ್ರವಲ್ಲದೆ, ಇದೇ ಸಂದರ್ಭದಲ್ಲಿ, "ಮನುಷ್ಯರಿಗೆ ಅದ್ಭುತ ಶಕ್ತಿಗಳು ದೊರಕುವುದೂ ಒಂದು ಅಪಾಯವೆ. ಸಿದ್ಧಿಗಳನ್ನು ಹೇಗೆ ಸದುಪಯೋಗಪಡಿಸಿಕೊಳ್ಳಬೇಕೆಂಬುದು ಅನೇಕರಿಗೆ ತಿಳಿದಿರುವುದಿಲ್ಲ. ಆ ಸಿದ್ಧಿ ತನಗೆ ಹೇಗೆ ಬಂತು ಎಂಬುದನ್ನು ಅರಿಯದ ಮನುಷ್ಯನಿಗೆ ಅದನ್ನು ರಕ್ಷಿಸಿಕೊಳ್ಳುವ ಸಿದ್ಧತೆಯೂ ಇರುವುದಿಲ್ಲ. ಆಗ ಅಂತಹ ಸಿದ್ಧಿಗಳು ಅಜ್ಞರಾದ ಅವರಿಗೆ ಬೇಕಾದಷ್ಟು ಸಂಕಟಗಳನ್ನೇ ತಂದೊಡ್ಡುತ್ತವೆ" ಎಂಬುದಾಗಿಯೂ ಎಚ್ಚರಿಕೆ ನೀಡಿದ್ದಾರೆ.

೩೦

ಸಿದ್ಧಿಯನ್ನು ನಾವು ಅನಿಷ್ಟದಂತೆ ತ್ಯಜಿಸಬೇಕು. ಸಾಧನೆ, ಸಂಯಮ ಅಥವಾ ಇಂದ್ರಿಯನಿಗ್ರಹದ ಪರಿಣಾಮವಾಗಿ ಇವು ತಾವಾಗಿಯೇ ಬರುವುವು. ಆದರೆ ಯಾರು ಇಂತಹ ಸಿದ್ಧಿಗಳಲ್ಲಿ ಆಸಕ್ತರಾಗಿರುತ್ತಾರೆಯೋ, ಅವರು ಅಲ್ಲಿಯೇ ನಿಂತುಕೊಳ್ಳಬೇಕಾಗುವುದು. ಮುಂದೆ ಹೋಗಲು ಸಾಧ್ಯವಿಲ್ಲ.

– ಶ್ರೀರಾಮಕೃಷ್ಣ

# ಛಾಯಾಚಿತ್ರಗಳಲ್ಲಿ ಸ್ವಾಮಿ ವಿವೇಕಾನಂದರು

ಕೆ. ಆರ್. ಮೋಹನ್



**ಛಾಯಾಚಿತ್ರ ೯೬, ೯೭**

ಸೋದರಿ ಗಾರ್ಗಿ (ಮೇರಿ ಲೂಯಿಸ್ ಬರ್ಕ್) ಅವರು ಸ್ವಾಮಿ ವಿವೇಕಾನಂದರ ಅಮೆರಿಕ ಭೇಟಿಯ ವಿಸ್ತೃತ ಪರಿಚಯವನ್ನು ತಮ್ಮ ಗ್ರಂಥಗಳ ಮೂಲಕ ಮಾಡಿಕೊಟ್ಟಿದ್ದಾರೆ. ಅವರ ಪ್ರಕಾರ, ಸ್ವಾಮೀಜಿಯವರ ಹಿಂದಿನ ಮೂರು ಚಿತ್ರಗಳಂತೆಯೇ ಇನ್ನೂ ನಾಲ್ಕು ಫೋಟೋಗಳನ್ನು ಸ್ಯಾನ್‌ಫ್ರಾನ್ಸಿಸ್ಕೋದ ಬುಶ್‌ನೆಲ್ ಸ್ಟುಡಿಯೋದಲ್ಲಿ ತೆಗೆಯಲಾಯಿತು. ಇವೆಲ್ಲ ಕುಳಿತ ಭಂಗಿಯಲ್ಲಿಯೇ ಇವೆ. ಹಾಗೂ ಸ್ವಾಮೀಜಿ ಕ್ರಾಪ್ ಬಿಟ್ಟಿದ್ದಾರೆ. ಇದಲ್ಲದೆ, ಸುಂದರವಾಗಿ ಕೆತ್ತಲ್ಪಟ್ಟ ಕುರ್ಚಿಯಲ್ಲಿ ಅವರು ಕುಳಿತಿದ್ದಾರೆ. ಈ ಫೋಟೋಗಳಲ್ಲಿ ಇರುವ ಅವರ ವೇಷಭೂಷಣವೂ ವಿಶಿಷ್ಟವಾಗಿದೆ. ಪಾದ್ರಿಗಳು ಧರಿಸುವ ಒಳಕತ್ತಿನ ಪಟ್ಟಿ ಹಾಗೂ ಸಡಿಲವಾಗಿರುವ ಕೋಟು ಮತ್ತು ಪ್ಯಾಂಟ್‌ಗಳನ್ನು ಅವರು ಧರಿಸಿದ್ದಾರೆ. ಇವೆಲ್ಲ ಚಿತ್ರಗಳಲ್ಲಿ ಅವರ ಮುಖ ಕಣ್ಣುಸೆಳೆಯುವ ಮನಮೋಹಕ ಕಾಂತಿಯಿಂದ ಕೂಡಿದೆ. ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಸ್ವಾಮೀಜಿಯವರ ಆಪ್ತ ಕಾರ್ಯದರ್ಶಿಯಾಗಿದ್ದ ಅವರ ಶಿಷ್ಯೆ ಮಿಸೆಸ್ ಹ್ಯಾನ್ಸ್‌ಬ್ರೋ ಎನ್ನುವವಳಿಗೆ ಸ್ವಾಮೀಜಿ ಹೀಗೆ ಹೇಳುತ್ತಾರೆ:



ಛಾಯಾಚಿತ್ರ ೯೭



ಛಾಯಾಚಿತ್ರ ೯೬

"ಜಗನ್ಮಾತೆ ನನ್ನನ್ನು ಒಂದು ವಿಚಿತ್ರ ಜಗತ್ತಿನಲ್ಲಿ ಎತ್ತಿ ಹಾಕಿದ್ದಾಳೆ. ಇಲ್ಲಿಯವರನ್ನು ನಾನು ಅರ್ಥಮಾಡಿಕೊಳ್ಳಲಾರೆ. ನನ್ನನ್ನು ಅವರು ಅರ್ಥಮಾಡಿಕೊಳ್ಳಲಾರರು ಎಂಬಂತಿದೆ. ಆದರೆ ನಾನು ಇಲ್ಲಿ ಹೆಚ್ಚೆಚ್ಚು ಕಾಲ ಇದ್ದಂತೆ ನನಗೊಂದು ಭಾವನೆ ಬರುತ್ತಿದೆ. ನಾನು ಸಂಧಿಸಿದ ಈ ಜನಗಳೆಲ್ಲ ನನಗೆ ಸೇರಿದವರೇ ಮತ್ತು ನನ್ನ ಪಾಲಿನ ಕರ್ತವ್ಯದಲ್ಲಿ ಪಾಲ್ಗೊಳ್ಳಬೇಕೆಂದು ಇಲ್ಲಿಗೆ ಬಂದಿದ್ದಾರೆ."

ಮೇಲಿನ ಚಿತ್ರಗಳಲ್ಲಿ ಸ್ವಾಮೀಜಿಯವರ ಮಂದಹಾಸ ಮೋಡಿ ಮಾಡುವಂತಿದೆ.




### ಛಾಯಾಚಿತ್ರ ೯೮

ಇದೂ ಕೂಡ ಅದೇ ಸ್ಟುಡಿಯೋದಲ್ಲಿ ತೆಗೆದ ಮೂರನೇ ಚಿತ್ರ. ಈ ಚಿತ್ರದ ಬಗ್ಗೆ ಸ್ವಾಮಿ ಶ್ರದ್ಧಾನಂದರು ಕೊಟ್ಟ ಮಾಹಿತಿ ಈ ರೀತಿ ಇದೆ:

"ಒಮ್ಮೆ ನಾನು ಬೇಲೂರು ಮಠದಲ್ಲಿರುವ ಸ್ವಾಮೀಜಿಯವರ ಕೋಣೆಯನ್ನು ಸ್ವಚ್ಛ ಮಾಡುತ್ತಿದ್ದೆ. ಆಗ ಮಹಾಪುರುಷಜಿ (ಸ್ವಾಮಿ ಶಿವಾನಂದ) ಮಹಾರಾಜರು ಬಂದರು. ದಟ್ಟವಾದ ಕಪ್ಪು ಮತ್ತು ಗುಂಗುರು ಕೂದಲು ಹಾಗೂ ಪಾಶ್ಚಿಮಾತ್ಯ ಉಡುಪಿನಲ್ಲಿ ಇರುವ ಈ ಚಿತ್ರದ ದೊಡ್ಡ ಪ್ರತಿಯನ್ನು ಕಟ್ಟು ಹಾಕಿಸಿ ಉತ್ತರದಿಕ್ಕಿನ ಗೋಡೆಯಲ್ಲಿ ನೇತುಹಾಕಲಾಗಿತ್ತು. ಈ ಚಿತ್ರವನ್ನು ನೋಡಿ, 'ಈ ಚಿತ್ರದಲ್ಲಿ ಸ್ವಾಮೀಜಿ ಎಷ್ಟು ಭವ್ಯವಾಗಿ ಕಾಣಿಸುತ್ತಿದ್ದಾರೆ! ನಿವೇದಿತಾ ಸ್ವಾಮೀಜಿಯವರನ್ನು 'ರಾಜ' ಎಂದು ಸಂಬೋಧನೆ ಮಾಡುತ್ತಿದ್ದಳು. ನಿಜವಾಗಿಯೂ ಅವರು ರಾಜನಂತೆ ಕಾಣುತ್ತಿದ್ದಾರೆ. ಅಮೆರಿಕದಲ್ಲಿ ಸ್ವಾಮೀಜಿಯವರನ್ನು 'ಜನಮಾನಸದ ಯುವರಾಜ' (prince among men) ಎಂದು ಕರೆಯುತ್ತಿದ್ದರು' ಎಂದು ಮಹಾಪುರುಷಜಿಯವರು ಉದ್ಗಾರ ಮಾಡಿದರು."

ಈ ಚಿತ್ರ ಈಗಲೂ ಸ್ವಾಮೀಜಿಯವರ ಕೋಣೆಯಲ್ಲಿ ವಿರಾಜಮಾನವಾಗಿದೆ. ಸ್ವಾಮೀಜಿಯವರ ಜನಪ್ರಿಯ ಚಿತ್ರಗಳ ಪೈಕಿ ಇದೂ ಒಂದು.

### ಛಾಯಾಚಿತ್ರ ೯೯

ಇದು ಸ್ಯಾನ್‌ಫ್ರಾನ್ಸಿಸ್ಕೋದ ಸ್ಟುಡಿಯೋದಲ್ಲಿ ತೆಗೆದ ನಾಲ್ಕನೆಯ ಹಾಗೂ ಕೊನೆಯ ಚಿತ್ರ.

"ನನ್ನ ಜೀವನದಲ್ಲೊಂದು ಉತ್ಕ್ರಾಂತಿಯೇ ಆಯಿತು. ಇಂತಹ ಒಂದು ಉತ್ಕ್ರಾಂತಿ ನನ್ನನ್ನು ರಾಮಕೃಷ್ಣರಲ್ಲಿಗೆ ಕರೆ ತಂದಿತು; ಇನ್ನೊಂದು ನನ್ನನ್ನು ಅಮೆರಿಕೆಗೆ ಕಳುಹಿಸಿತು" ಎಂದು ಸ್ವಾಮೀಜಿ ಸೋದರಿ ನಿವೇದಿತಾಗೆ ಬರೆದ ಪತ್ರವೊಂದರಲ್ಲಿ ಹೇಳುತ್ತಾರೆ.




ಸಾಧನಾವಧಿಯಲ್ಲಿ ಸ್ವಾಮೀಜಿಯವರ ದೃಷ್ಟಿಕೋನ ಹೇಗಿತ್ತು? ಅವರ ತಮ್ಮ ಮಹೇಂದ್ರನಾಥ ದತ್ತ ಬರೆಯುತ್ತಾರೆ: "Who will win, I the pure consciousness or you the objective world? The world can not overpower me. I will conquer it" ಜಡಜಗತ್ತು ಗೆಲ್ಲುತ್ತದೆಯೋ ಅಥವಾ ಚೈತನ್ಯಸ್ವರೂಪನಾದ ನಾನೋ? ಜಗತ್ತು ನನ್ನನ್ನು ಆಳಲಾರದು. ನಾನೇ ಜಗತ್ತಿನ ಮೇಲೆ ಸ್ವಾಮ್ಯವನ್ನು ಪಡೆಯುತ್ತೇನೆ." ಇಂಥ ದೃಢತೆ ಅವರದಾಗಿತ್ತು. ಗಿರೀಶ ಘೋಷ್‌ಗೆ ಒಮ್ಮೆ ಸ್ವಾಮೀಜಿ ಹೇಳುತ್ತಾರೆ: "ಮಾಯೆ ನನ್ನನ್ನು ಸೋಲಿಸಲು ಹವಣಿಸುತ್ತಿದ್ದಾಳೆ. ನಾನು ಅವಳನ್ನು ಸೋಲಿಸಲು ಹೋರಾಡುತ್ತಿದ್ದೇನೆ. ಈರ್ವರ ಮಧ್ಯೆ ಒಪ್ಪಂದವಾಗಲು ಸಾಧ್ಯವೇ ಇಲ್ಲ. ಒಂದೋ ಮಾಯೆ ಮಡಿಯಬೇಕು ಅಥವಾ ನಾನು ಮಡಿಯಬೇಕು. ಇಬ್ಬರೂ ಒಟ್ಟಿಗೆ ಇರಲಾಗದು" ಸ್ವಾಮೀಜಿಯವರದು ಎಂಥ ದೃಢನಿರ್ಧಾರ ಮತ್ತು ಘನತರ ಚಿಂತನೆ! ಮಾಯೆಯ ಮೇಲಿನ ವಿಜಯ, ಆತ್ಮಪ್ರಭುತ್ವ – ಇವೇ ಸ್ವಾಮೀಜಿಯವರ ಸಿದ್ಧಿಗಳು.

ಮೂಲ: ಸ್ವಾಮಿ ಚೇತನಾನಂದ ಅನುವಾದ: ಮಾತಾ ತ್ಯಾಗಮಯೀ

ಪುಸ್ತಕ ಪರಿಚಯ

# ೧೦೮ ಉಪನಿಷತ್ ಸರ್ವಸ್ವ

ಪ್ರಧಾನಾಚಾರ್ಯರು : ಉ.ವೇ.ಪ್ರ.ಶ್ರೀಮಾನ್ ಭಾರ್ಗವ ನರಸಿಂಹ, ಪ್ರಕಾಶಕರು : ತಿರುಮಲ ತಿರುಪತಿ ಪ್ರತಿಷ್ಠಾನಂ (ರಿ), ಬೆಂಗಳೂರು
ದೂರವಾಣಿ: ೦೮೦–೨೬೬೧೦೫೧೦, ೨೬೭೫೪೯೫೨, ಪುಸ್ತಕದ ಬೆಲೆ: ರೂ. ೨೦೦೦ (ಮೂರು ಸಂಪುಟ ಸೇರಿ)

ಮೂರು ಬೃಹತ್ ಸಂಪುಟಗಳಲ್ಲಿ ಹರಡಿರುವ ಸುಮಾರು ೧೮೦೦ ಪುಟಗಳ ಈ ಗ್ರಂಥರತ್ನದಲ್ಲಿ ೧೦೮ ಉಪನಿಷತ್ತುಗಳ ಮೂಲವೂ, ಆ ಮಂತ್ರಗಳ ಅರ್ಥವೂ ಸುಂದರವಾಗಿ ಮೂಡಿಬಂದಿದೆ. ಈ ಗ್ರಂಥಕ್ಕೆ ಕಳಶವಿಟ್ಟಂತೆ ವಿಸ್ತಾರವಾದ, ಒಂದು ಪ್ರತ್ಯೇಕವಾದ ಪುಸ್ತಕವೇ ಆಗಬಹುದೇನೋ ಎನಿಸುವಂತಹ, ವಿದ್ವತ್ಪೂರ್ಣ ಮುನ್ನುಡಿಯೂ ಇದೆ. ಇಂತಹ ಅಸಾಧಾರಣ ಸಂಕಲನವು ಯಾರನ್ನಾದರೂ ವಿಸ್ಮಿತರನ್ನಾಗಿಸುವುದರಲ್ಲಿ ಸಂದೇಹವೇ ಇಲ್ಲ.

ಬೆಂಗಳೂರಿನ ತಿರುಪತಿ ತಿರುಮಲ ಪ್ರತಿಷ್ಠಾನಂ ಸಂಸ್ಥೆಯವರು, ಶ್ರೀ ಉ. ವೇ. ಪ್ರ. ಭಾರ್ಗವ ನರಸಿಂಹರವರ ನೇತೃತ್ವದಲ್ಲಿ ಮಾಡಿರುವ ಈ ಕೆಲಸವು ಶ್ಲಾಘನೀಯವಾದುದು. ೧೦೮ ಉಪನಿಷತ್ತುಗಳ ಸಂಗ್ರಹವೇ ಒಂದು ದೊಡ್ಡ ಕೆಲಸ. ಅದರೊಡನೆ ಅರ್ಥಗಳನ್ನೂ ಕೊಡುವುದು ಒಂದು ಅಪರೂಪದ ಸಾಧನೆಯೇ ಎಂಬುದರಲ್ಲಿ ಸಂದೇಹವಿಲ್ಲ.

ಪ್ರಧಾನವಾಗಿ ದಶೋಪನಿಷತ್ತುಗಳೆಂದು ಪ್ರಸಿದ್ಧವಾದ ಈಶಾದಿ ಹತ್ತು ಉಪನಿಷತ್ತುಗಳೊಂದಿಗೆ ಗ್ರಂಥವು ಆರಂಭವಾಗುತ್ತದೆ. ಈ ಉಪನಿಷತ್ತುಗಳಲ್ಲಿ ಗುರುತಿಸಲಾದ ಮಹಾವಾಕ್ಯ ಚತುಷ್ಟಯವನ್ನೂ, ಒಂದೊಂದು ವೇದಕ್ಕೂ ಸಂಪ್ರದಾಯದಲ್ಲಿ ಪಠಿಸಲ್ಪಡುವ ಶಾಂತಿಮಂತ್ರಗಳನ್ನೂ ಕೊಡಲಾಗಿದೆ. ಅಲ್ಲದೆ ಈ ೧೦೮ ಉಪನಿಷತ್ತುಗಳನ್ನು ವಿಭಾಗಿಸಿ, ಋಗ್ವೇದವೇ ಮೊದಲಾದ ನಾಲ್ಕು ವೇದಗಳಿಗೆ ಸೇರಿದವುಗಳನ್ನು ಗುರುತಿಸಲಾಗಿದೆ. ಅದಲ್ಲದೆ ಉಪನಿಷತ್ತುಗಳು ಪ್ರಧಾನವಾಗಿ ಪ್ರತಿಪಾದಿಸುವ ವಿಷಯವನ್ನು ಆಧರಿಸಿ ಸಂನ್ಯಾಸ, ಯೋಗವಿದ್ಯೆ, ವೇದಾಂತ, ವೈಷ್ಣವ, ಶೈವ ಮತ್ತು ಶಕ್ತಿ ಸಿದ್ಧಾಂತಗಳನ್ನು ಬೋಧಿಸುವ ಉಪನಿಷತ್ತುಗಳನ್ನೂ ಗುರುತಿಸಿಕೊಡಲಾಗಿದೆ. ಇವೆಲ್ಲವೂ ಜಿಜ್ಞಾಸುಗಳಿಗೆ, ಸಂಶೋಧಕರಿಗೆ ಬಹಳ ಉಪಯುಕ್ತವಾದ ವಿಷಯಗಳು. ಮಂತ್ರಗಳನ್ನು ಬಹಳ ಸ್ಪಷ್ಟವಾಗಿ ದಪ್ಪಕ್ಷರಗಳಲ್ಲಿ ಮುದ್ರಿಸಿಕೊಟ್ಟಿರುವುದು ಓದುಗರಿಗೆ ಅನುಕೂಲವಾಗಿದೆ. ಮುದ್ರಣವು ಓದಲು ಬಹಳ ಸುಂದರವಾದ ಲಿಪಿಯಲ್ಲಿದ್ದು, ಸ್ಪಷ್ಟವಾಗಿ ಪ್ರಯಾಸವಿಲ್ಲದೆ ಓದಲು ಅನುಕೂಲವಾಗಿದೆ.




ವಿಸ್ತಾರವೂ ವಿಚಾರಾತ್ಮಕವೂ ಆದ ಪ್ರಸ್ತಾವನೆಯಲ್ಲಿ ಈ ವೇದ ವಾಙ್ಮಯದ ವಿಷಯಗಳನ್ನು ಮತ್ತು ದೃಷ್ಟಿಕೋನವನ್ನು ವಿವರವಾಗಿ ಪರಿಶೀಲಿಸಲಾಗಿದೆ. ವೇದಗಳಲ್ಲಿ ಪ್ರತಿಪಾದಿತವಾದ ವಿಷಯಗಳ ಬಗೆಗೆ ಸಾಂಪ್ರದಾಯಿಕ, ಆಧುನಿಕ ಹಾಗೂ ಪಾಶ್ಚಾತ್ಯರ ಅಭಿಪ್ರಾಯಗಳನ್ನು ಕ್ರೋಡೀಕರಿಸಲಾಗಿದೆ. ಭಾರತೀಯ ದರ್ಶನಗಳಾದ ಸಾಂಖ್ಯ, ನ್ಯಾಯ, ವಿಶಿಷ್ಟಾದ್ವೈತ ಹಾಗೂ ಅದ್ವೈತ ದರ್ಶನಗಳ ಮುಖ್ಯ ಪ್ರಮೇಯಗಳನ್ನೂ ಸಹ ನೀಡಲಾಗಿದೆ. ಅದ್ವೈತ ಮತ್ತು ವಿಶಿಷ್ಟಾದ್ವೈತಗಳ ದೃಷ್ಟಿಕೋನದಲ್ಲಿರುವ ಭಿನ್ನತೆಗಳನ್ನೂ ಸಹ ವಿಚಾರ ಮಾಡಲಾಗಿದೆ. ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಮಾರ್ಗದಲ್ಲಿ ವಿಶ್ವಸೃಷ್ಟಿಯ ರಹಸ್ಯವನ್ನು ವಿಸ್ತಾರವಾಗಿ ವಿವೇಚಿಸಲಾಗಿದೆ. ಹಾಗೆಯೇ ಆತ್ಮತತ್ತ್ವದ ನಿರೂಪಣೆ ಮತ್ತು ಉಪನಿಷತ್ತುಗಳ ಪ್ರಮುಖ ಬೋಧನೆಗಳನ್ನೂ ಸಹ ವಿಚಾರಮಾಡಿ ಕೊಡಲಾಗಿದೆ.

ಉಪನಿಷತ್ತುಗಳಲ್ಲಿ ಕಂಡುಬರುವಂತೆ ಭಾರತದ ಅತ್ಯುನ್ನತ ಜ್ಞಾನವು 'ನಮ್ಮ ಆತ್ಮವನ್ನು ಅರಿಯುವುದು' ಎಂಬ ಪ್ರಕಾಶಕರ ನುಡಿ ಸತ್ಯವಾದುದು. 'ಅಸ್ತಿತ್ವವೊಂದನ್ನೇ ಜ್ಞಾನಿಗಳು ವಿವಿಧ ರೀತಿಯಲ್ಲಿ ಕರೆಯುವರು' ಎಂಬ ಋಗ್ವೇದದ ಸಂದೇಶವನ್ನು ಸ್ಪಷ್ಟವಾಗಿ ಅವರು ತಿಳಿಸಿರುತ್ತಾರೆ. ಛಾಂದೋಗ್ಯದ ದಹರವಿದ್ಯಾಪ್ರಕರಣದ ವಿಮರ್ಶೆಯಲ್ಲಿ 'ಶಾಖ, ನೀರು, ಆಹಾರ' ಎಂಬ ಭೌತಿಕ ತತ್ತ್ವಗಳ ಕಾರಣವನ್ನು ಅರಿಯುವ ಮೂಲಕ, ವಿಶ್ವದ ಮೂಲವಾದ 'ಸಮರ್ಥ ಕಾರಣ'ವನ್ನು ಗುರುತಿಸಿರುವುದನ್ನು ಗಮನಿಸಬಹುದೆಂಬ ವಿವರಣೆಯನ್ನು ಅನುವಾದಕರು ನೀಡಿದ್ದಾರೆ. ಇದಲ್ಲದೆ, ಅಶ್ವಪತಿ ಕೇಕಯನ ವೃತ್ತಾಂತ, ಪಿಪ್ಪಲಾದರು ಬ್ರಹ್ಮಜಿಜ್ಞಾಸುಗಳಿಗೆ ನೀಡಿದ ಆತ್ಮೋಪದೇಶ, ನಾರದನಿಗೆ ಸನತ್ಕುಮಾರನು ಮಾಡಿದ ಭೂಮವಿದ್ಯೆಯ ಉಪದೇಶ ಮುಂತಾದ ಹಲವಾರು ಉಪನಿಷತ್ತುಗಳ ಸಾರಭೂತ ಉಪದೇಶಗಳನ್ನು ಗ್ರಂಥಕರ್ತರು ಪ್ರಸ್ತಾವನೆಯಲ್ಲಿ ವಿಚಾರಪೂರ್ವಕವಾಗಿ ವಿವರಿಸುತ್ತಾರೆ. ಕಡೆಯದಾಗಿ ಪ್ರಕಾಶಕರು ಕೊಡುವ ಸಂದೇಶವಿದು: 'ಬ್ರಹ್ಮವು ಒಬ್ಬನು ತಿಳಿದಿರುವುದಕ್ಕಿಂತಲೂ ಹೆಚ್ಚು ಮತ್ತು ತಿಳಿಯದಿರುವುದಕ್ಕಿಂತಲೂ ಹೆಚ್ಚು ಎಂದು ಉಪನಿಷತ್ತು ಘೋಷಿಸುತ್ತದೆ.' ಇದು ಎಲ್ಲರೂ ಅಗತ್ಯವಾಗಿ ಅರಿಯಬೇಕಾದ ಅಂಶ.

ಮಂತ್ರಗಳ ಅರ್ಥಗಳು ಸರಳವಾಗಿದೆ. ಅವು ಬಹುತೇಕ ಅದ್ವೈತ ಸಂಪ್ರದಾಯಕ್ಕೆ ಅನುಗುಣವಾಗಿದೆಯೆಂಬುದು ಅನೇಕ ಕಡೆಗಳಲ್ಲಿ ವೇದ್ಯವಾಗುತ್ತದೆ. ಮೊದಲ ಮಂತ್ರವಾದ 'ಈಶಾವಾಸ್ಯಮಿದಂ ಸರ್ವಂ' ಎಂಬ ಮಂತ್ರಕ್ಕೆ ಕೊಟ್ಟಿರುವ, 'ಈ ಜಗತ್ತೆಲ್ಲವೂ ನಾಮರೂಪಕ್ರಿಯಾರಹಿತವಾದ ಈಶ್ವರಸ್ವರೂಪವಾಗಿ ಮಾತ್ರವೇ ನೋಡುವಂತೆ ಆಗಲಿ' ಎಂಬಲ್ಲಿಯೇ ಇದನ್ನು ಗಮನಿಸಬಹುದು. ಕಠೋಪನಿಷತ್ತೇ ಆಗಲಿ, ತೈತ್ತಿರೀಯವೇ ಆಗಲಿ (ಪುಚ್ಛಬ್ರಹ್ಮದ ಪ್ರತಿಪಾದನೆ) ಅದ್ವೈತದ ದೃಷ್ಟಿಕೋನವಿರುವುದು ಸ್ಪಷ್ಟವಾಗಿ ಅಲ್ಲೆಲ್ಲ ತೋರಿಬರುತ್ತದೆ. ಈ ವಿಷಯವನ್ನು ತಿಳಿಸಬೇಕಾದ ಅಗತ್ಯವೇಕೆಂದರೆ ಪ್ರಸ್ತಾವನೆಯಲ್ಲಿ ಇದರ ಬಗ್ಗೆ ಸ್ಪಷ್ಟವಾಗಿ ಸೂಚನೆ ಕಂಡುಬರುವುದಿಲ್ಲ, ಅದಕ್ಕೆ.

ಈ ಅದ್ಭುತ ಗ್ರಂಥದ ವಿಮರ್ಶೆ ಮಾಡುವುದೆಂದರೆ ಬಹಳ ಕಷ್ಟವಾದ ಕೆಲಸವೇ. ಒಂದು ಸಾಗರವನ್ನು ತೋರಿಸಿ ಇದರ ಬಗ್ಗೆ ಬರೆಯಿರಿ ಎಂದರೆ 'ಅಂತ್ಯ ಕಾಣದು', 'ಸುಂದರವಾದುದು', 'ಅತಿ ವಿಸ್ತಾರವಾದುದು', 'ಅಗಾಧವಾದುದು' ಮುಂತಾಗಿ ಉದ್ಗಾರ ತೆಗೆಯಬಹುದೇ ಹೊರತು, 'ಇದು ಏಕೆ ಹೀಗಿಲ್ಲ', 'ಇದು ಏಕೆ ಹೀಗಿದೆ' ಮುಂತಾಗಿ ವಿವರಿಸುವುದು ಕಷ್ಟವೇ. ಇದರ ಆವಶ್ಯಕತೆಯೂ ಈ ಕೃತಿಗೆ ಇಲ್ಲವೆಂದೇ ನಂಬಿದ್ದೇನೆ.

ಪ್ರಾಯಶಃ ಕನ್ನಡದಲ್ಲಿ ಪ್ರಪ್ರಥಮವಾಗಿ ಸಂಗ್ರಹಿಸಲ್ಪಟ್ಟ ಈ ೧೦೮ ಉಪನಿಷತ್ತುಗಳು ವಿದ್ಯಾರ್ಥಿಗಳಿಗೆ, ತತ್ತ್ವಜಿಜ್ಞಾಸುಗಳಿಗೆ, ಸಂಶೋಧಕರಿಗೆ ಅತ್ಯಂತ ಉಪಯುಕ್ತವಾದುದು ಎಂಬುದರಲ್ಲಿ ಸಂದೇಹವೇ ಇಲ್ಲ. ಈ ಅಮೂಲ್ಯ ಗ್ರಂಥವನ್ನು ಪ್ರಕಟಿಸಿದ ಪ್ರಕಾಶಕರಿಗೆ ಭಗವಂತನು ಸಕಲ ಮಂಗಳಗಳನ್ನೂ ಕರುಣಿಸಲೆಂದೂ, ಇಂತಹ ಅನೇಕ ಗ್ರಂಥಗಳನ್ನು ಪ್ರಕಾಶಿಸಲು ಸಕಲವಿಧವಾದ ಅನುಕೂಲಗಳನ್ನೂ ಮಾಡಿಕೊಡಲೆಂದೂ ಹಾರೈಸುತ್ತೇನೆ.

– ವಿ. ನರಸಿಂಹನ್, ಬೆಂಗಳೂರು.

ಕಥೆ : ರೇವತಿ

ಚಿತ್ರ : ಗೋವಿ

# ಮಹಾತ್ಮ ಮಾಂಡವ್ಯ













5
ಅಯ್ಯೋ, ಸಂತನ ವೇಷದಲ್ಲಿರುವ ಈತ ನಿಜವಾಗಿಯೂ ಕಳ್ಳರ ನಾಯಕ!
ಸರಿ, ಈ ಕಳ್ಳರೊಡನೆ ಇವನನ್ನೂ ರಾಜನ ಹತ್ತಿರ ಕರೆದುಕೊಂಡು ಹೋಗೋಣ.


6
ಈ ಸಾಧುವೇ ಕಳ್ಳರ ನಾಯಕನೆಂದು ನೀವು ಹೇಳುತ್ತಿದ್ದೀರೇನು? ನನಗೆ ಹಾಗೆ ಅನ್ನಿಸುವುದಿಲ್ಲ.


ಹೌದು, ಮಹಾಸ್ವಾಮಿ. ಇವನೇ ಲೂಟಿಕೋರರ ನಾಯಕ. ಈಗ ಸಾಧುವಿನ ವೇಷ ಹಾಕಿಕೊಂಡಿದ್ದಾನೆ, ಅಷ್ಟೇ. ಇವನ ಮುಂದೆಯೇ ನಾವು ಕದ್ದ ಮಾಲನ್ನೆಲ್ಲ ವಶಪಡಿಸಿಕೊಂಡೆವು.


7
ಆಗಲಿ, ಇವನು ಕಳ್ಳತನ ಮಾಡಿದ್ದಾನೆ. ಇದಲ್ಲದೆ ಸಾಧುವಿನ ವೇಷ ಧರಿಸಿ ಜನಗಳಿಗೆ ಮೋಸಮಾಡಿದ್ದಾನೆ. ಊರಿನ ಮಧ್ಯದಲ್ಲಿ ಎಲ್ಲ ಜನರ ಮಧ್ಯೆ ಅವನನ್ನು ಶೂಲಕ್ಕೆ ಏರಿಸಿ.


8
ಮಾಂಡವ್ಯರನ್ನು ಶೂಲಕ್ಕೆ ಏರಿಸಲಾಯಿತು. ಜನರ ದೊಡ್ಡ ಗುಂಪೇ ನೋಡಲು ನೆರೆದಿತ್ತು. ಶೂಲದ ಒಂದು ತುಂಡು ಋಷಿಯ ಕತ್ತನ್ನು ಹೊಕ್ಕಿ ಹೊರಗೆ ಬಂದಿತು. ಹಾಗಿದ್ದರೂ ಸಂನ್ಯಾಸಿಯು ಶಾಂತಚಿತ್ತನಾಗಿಯೇ ಇದ್ದನು.
ಆಹಾ! ಇಷ್ಟೊಂದು ನೋವು ಅನುಭವಿಸುತ್ತಿದ್ದರೂ, ಆತನು ಧ್ಯಾನದಲ್ಲಿ ಮುಳುಗಿದ್ದಾನೆ!
ನಿಜವಾಗಿಯೂ ಈತನು ಮಹಾನ್ ಋಷಿಯೇ ಆಗಿರಬೇಕು.










12 ಅಷ್ಟುಹೊತ್ತಿಗೆ ಆರಕ್ಷಕರು ತಮ್ಮ ತಪ್ಪನ್ನು ಅರಿತುಕೊಂಡರು. ಸಾಧುಗಳ ಮಹಾನತೆಯನ್ನು ತಿಳಿದುಕೊಂಡ ಅವರು ರಾಜನ ಹತ್ತಿರ ಹೋಗಿ ಎಲ್ಲವನ್ನೂ ತಿಳಿಸಿದರು. ರಾಜನೂ ದುಃಖ ಆತಂಕಗಳಿಂದ ಓಡಿಬಂದನು.



14

ಓ ರಾಜನೇ, ಈ ಕಬ್ಬಿಣದ ತುಂಡು ಹಾಗೆಯೇ ಇರಲಿ. ಇದಕ್ಕೆ ಹೂವಿನ ಬುಟ್ಟಿಯನ್ನು ತೂಗುಹಾಕಬಹುದು. ನಾನು ಶಿವನ ಪೂಜೆಗೆ ಹೂವುಗಳನ್ನು ಕೀಳುವಾಗ ಇದು ಉಪಯೋಗಕ್ಕೆ ಬರುತ್ತದೆ.



ಓ ಮಹಾತ್ಮರೇ, ನೀವು ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡಿರುವವರು. ನಿಮಗೆ ಈ ದುರದೃಷ್ಟ ಹೇಗೆ ತಾನೇ ಬರಲು ಸಾಧ್ಯ?

15

ಓ ರಾಜನೇ, ನನ್ನ ಬಾಲ್ಯದ ದಿನಗಳಲ್ಲಿ ನಾನು ಚಿಟ್ಟೆಗಳನ್ನು ಹಿಡಿಯುವುದರಲ್ಲಿ, ಅವುಗಳ ರೆಕ್ಕೆಗಳನ್ನು ಕೀಳುವುದರಲ್ಲಿ, ಅವುಗಳಿಗೆ ಗುಂಡುಸೂಜಿ ತೂರಿಸುವುದರಲ್ಲಿ ಆನಂದವನ್ನು ಕಾಣುತ್ತಿದ್ದೆನು. ನನ್ನ ತುಂಟತನಕ್ಕೆ ದೇವರು ಕೊಟ್ಟ ಶಿಕ್ಷೆ ಇದು.



16

ಮಹಾತ್ಮ ಮಾಂಡವ್ಯರು ಕಬ್ಬಿಣದ ಶೂಲವನ್ನು ಕತ್ತಿನಲ್ಲಿ ಸಿಕ್ಕಿಸಿಕೊಂಡೇ ತಮ್ಮ ಇಡೀ ಜೀವನವನ್ನು ಕಳೆದರು. ಅದಕ್ಕೆಂದೇ ಅವರನ್ನು 'ಶೂಲದ ಮಾಂಡವ್ಯ' ಎಂದು ಕರೆಯಲಾಗುತ್ತಿತ್ತು. ಅವರು ತಪಸ್ಸಾಧನೆಯಲ್ಲಿ ಪರಿಣತರಾಗಿದ್ದರು. ಆದರೂ ಬಾಲ್ಯದಲ್ಲಿ ಮಾಡಿದ ತಪ್ಪಿಗೆ ಅವರು ಶಿಕ್ಷೆಯನ್ನು ಅನುಭವಿಸಬೇಕಾಯಿತು. ಇದು ನಮಗೆಲ್ಲರಿಗೂ ದೊಡ್ಡ ಪಾಠ.



"ಈ ದೇಹ ಕಾಣಿಸಿಕೊಳ್ಳುತ್ತದೆ; ಅದೃಶ್ಯವಾಗುತ್ತದೆ. ಆತ್ಮ ಮಾತ್ರ ಎಂದಿಗೂ ನಶಿಸುವುದಿಲ್ಲ. ಅದು ಅಡಕೆ ಫಲವಿದ್ದ ಹಾಗೆ. ಅದಿನ್ನೂ ಹಸಿಯಾಗಿದ್ದಾಗ, ಅದನ್ನು ಬೇರ್ಪಡಿಸುವುದು ಕಷ್ಟ. ಒಣಗಿದಾಗ ಅದರ ಸಿಪ್ಪೆಯನ್ನು ಬೇರ್ಪಡಿಸಬಹುದು. ಅದೇ ರೀತಿ, ಭಗವತ್ಸಾಕ್ಷಾತ್ಕಾರವಾದ ನಂತರವಷ್ಟೇ ನಮಗೆ ನಿಜವಾದ ಅರಿವು ಉಂಟಾಗುತ್ತದೆ. ಆತ್ಮವು ದೇಹಕ್ಕಿಂತ ಭಿನ್ನ ಎನ್ನುವ ಜ್ಞಾನ ಆಗ ತಾನೇತಾನಾಗಿ ತಿಳಿಯುತ್ತದೆ."



**–ಶ್ರೀರಾಮಕೃಷ್ಣ**

# ಜೈಪುರದಲ್ಲಿ ನೂತನ ಶ್ರೀರಾಮಕೃಷ್ಣ ಮಂದಿರ

ರಾಜಸ್ಥಾನದಲ್ಲಿ ರಾಮಕೃಷ್ಣ ಮಿಷನ್ನಿನ ಕೇಂದ್ರವೊಂದನ್ನು ಸ್ಥಾಪಿಸಬೇಕೆಂಬ ಸ್ವಾಮಿ ವಿವೇಕಾನಂದರ ಬಯಕೆಯಂತೆ ೧೯೮೮ರಲ್ಲಿ ಜೈಪುರದಲ್ಲಿ ರಾಮಕೃಷ್ಣ ಮಿಷನ್‌ನ ಶಾಖಾಕೇಂದ್ರವೊಂದು ತೆರೆಯಲ್ಪಟ್ಟಿತು. ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲಿ ಒಬ್ಬರಾದ ಸ್ವಾಮಿ ಯೋಗಾನಂದರ ಪುಣ್ಯ ಜಯಂತಿಯ ದಿನವಾದ ೨೦ ಮಾರ್ಚ್, ೨೦೧೪ರಂದು ಅಲ್ಲಿ ನೂತನ ಶ್ರೀರಾಮಕೃಷ್ಣ ಮಂದಿರದ ಉದ್ಘಾಟನಾ ಸಮಾರಂಭ ನೆರವೇರಿತು. ರಾಮಕೃಷ್ಣ ಮಠ ಮತ್ತು ಮಿಷನ್ನಿನ ಉಪಾಧ್ಯಕ್ಷರಲ್ಲಿ ಒಬ್ಬರಾದ ಶ್ರೀಮತ್ ಸ್ವಾಮಿ ಸ್ಮರಣಾನಂದಜಿ ಮಹಾರಾಜ್ ಅವರು ಮಂದಿರದ ಉದ್ಘಾಟನೆಯನ್ನು ನೆರವೇರಿಸಿದರು.

ಶ್ರೀಮಾತೆ ಶಾರದಾದೇವಿ, ಸ್ವಾಮಿ ವಿವೇಕಾನಂದ ಹಾಗೂ ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲಿ ಕೆಲವರು ಜೈಪುರವನ್ನು ತಮ್ಮ ಭೇಟಿಯಿಂದ ಪುನೀತಗೊಳಿಸಿದ್ದರು. ಈ ಚಾರಿತ್ರಿಕ ನಗರದಲ್ಲಿ ಶ್ರೀರಾಮಕೃಷ್ಣ ಮಂದಿರದ ಆವಶ್ಯಕತೆ ತಲೆದೋರಿದ್ದು, ರಾಮಕೃಷ್ಣ ಮಿಷನ್ ಆರಂಭಗೊಂಡ ಕೆಲವೇ ವರ್ಷಗಳಲ್ಲಿ, ಅಂದರೆ ೨೦೦೩ರಲ್ಲಿ ಹೊಸ ಮಂದಿರದ ನಿರ್ಮಾಣಕ್ಕೆ ಶಿಲಾನ್ಯಾಸ ಮಾಡಲಾಯಿತು. ಅನೇಕ ಮಂದಿ ಸಾಧು ಸಂನ್ಯಾಸಿಗಳ ಹಾಗೂ ಭಕ್ತರ ೧೧ ವರ್ಷಗಳ




ಅವಿರತ ಶ್ರಮದಿಂದ ಪೂರ್ಣಗೊಂಡ "ಶ್ರೀರಾಮಕೃಷ್ಣ ಮಂದಿರ" ದ ಉದ್ಘಾಟನೆಯೊಂದಿಗೆ ಅನೇಕ ದಿನಗಳ ಕನಸು ಸಾಕಾರಗೊಂಡಿತು. ರಾಜಸ್ಥಾನದ ಇತಿಹಾಸ, ಶಿಲ್ಪವೈಭವ, ಚಾರಿತ್ರಿಕ ಹಿನ್ನೆಲೆ ಇವನ್ನೆಲ್ಲ ನೆನಪಿಸುವಂತೆ ರಾಜಸ್ಥಾನದ ಮರಳುಶಿಲೆ (ಜೋಧಪುರದ ಕೆಂಪುಶಿಲೆ) ಯಿಂದ ಮಂದಿರದ ಹೊರಮೈಯನ್ನು ಕಟ್ಟಲಾಗಿದೆ. ದೇವಾಲಯದ ಪ್ರಧಾನ ಗೋಪುರ ೭೫ ಅಡಿ ಎತ್ತರವಿದೆ. ಪ್ರಾರ್ಥನಾ ಮಂದಿರದಲ್ಲಿ ೪೫೦ ಮಂದಿ ಕುಳಿತುಕೊಳ್ಳುವಷ್ಟು ಸ್ಥಳಾವಕಾಶವಿದೆ. ಮೊದಲನೇ ಅಂತಸ್ತಿನಲ್ಲಿರುವ ಪ್ರದಕ್ಷಿಣಾಪಥ ಮಂದಿರದ ವಿಶೇಷತೆಯಾಗಿದೆ. ನೆಲ ಅಂತಸ್ತಿನಲ್ಲಿ 'ವಿವೇಕಾನಂದ ಸಾಂಸ್ಕೃತಿಕ ಸಭಾಂಗಣ'ವಿದೆ. ಇದರಲ್ಲಿ ೫೦೦ ಮಂದಿ ಭಾಗವಹಿಸಬಹುದಾಗಿದೆ. ಜೈಪುರದ ಒಣ ಹವೆಯಲ್ಲಿ ಅನುಕೂಲವಾಗುವಂತೆ ಸಾಕಷ್ಟು ಗಾಳಿ, ಬೆಳಕು ಓಡಾಡುವಂತೆ ಮಂದಿರವನ್ನು ಕಟ್ಟಲಾಗಿದೆ. ಕಿಟಿಕಿಗಳಲ್ಲಿ ಎಲ. ಬೆಳಕಿನಲ್ಲಿ ವಿವಿಧ ಧರ್ಮಗಳ ಚಿಹ್ನೆಗಳನ್ನು ಬಿಂಬಿಸಲಾಗಿದೆ.

**ಮಂದಿರದ ಉದ್ಘಾಟನೆ:** ಮಾರ್ಚ್ ೧೮ರಿಂದ ೨೦ರ ವರೆಗೆ ವಿವಿಧ ಕಾರ್ಯಕ್ರಮಗಳೊಂದಿಗೆ ಶ್ರೀರಾಮಕೃಷ್ಣ ಮಂದಿರವನ್ನು



ಲೋಕಾರ್ಪಣೆ ಮಾಡಲಾಯಿತು. ೧೯ರಂದು ಮುಂಜಾನೆ ಮಿಷನ್ನಿನ ಸಾಧುಗಳು ಹಾಗೂ ಭಕ್ತರುಗಳಿಂದ ಘೋಷಾಯಾತ್ರೆ ನಡೆಯಿತು. ೨೦ ರಂದು ಉದ್ಘಾಟನಾ ಸಮಾರಂಭದ ಪ್ರಯುಕ್ತ ವೇದಘೋಷ, ಭಜನೆಗಳೊಂದಿಗೆ ದಿವ್ಯತ್ರಯರ ಭಾವಚಿತ್ರಗಳನ್ನು ಹೊತ್ತು ಮೆರವಣಿಗೆ ನಡೆಯಿತು. ದೇವಾಲಯಕ್ಕೆ ಮೂರು ಬಾರಿ ಪ್ರದಕ್ಷಿಣೆ ನಡೆದ ಬಳಿಕ ಮಂದಿರದಲ್ಲಿ ಮೊದಲ ಆರತಿ, ಪೂಜೆ, ಹೋಮ, ಭಜನೆಗಳು ನಡೆದವು. ಹಲವು ಮಂದಿ ಶಾಸ್ತ್ರೀಯ ಸಂಗೀತಗಾರರು ಸಂಗೀತ ಕಛೇರಿಗಳನ್ನು ನಡೆಸಿಕೊಟ್ಟರು. ದಿನಾಂಕ ೨೧ ರಂದು ನೂತನ ಮಂದಿರದಲ್ಲಿ ದುರ್ಗಾಸಪ್ತಶತೀ ಹೋಮ ನಡೆಯಿತು.

ಸ್ವಾಮಿ ಸ್ಮರಣಾನಂದಜಿಯವರಲ್ಲದೆ, ಹಿರಿಯ ಸಂನ್ಯಾಸಿಗಳಾದ ಸ್ವಾಮಿ ವಾಗೀಶಾನಂದಜಿ, ಸ್ವಾಮಿ ಗೌತಮಾನಂದಜಿ ಹಾಗೂ ಇನ್ನಿತರ ಹಿರಿಯ ಸಂನ್ಯಾಸಿಗಳು ವಿವಿಧ ಸಭಾ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡರು. ಸುಮಾರು ೨೪೦ ಮಂದಿ ಸಂನ್ಯಾಸಿಗಳು ಹಾಗೂ ೩೦೦೦ ಮಂದಿ ಭಕ್ತರು ಸಮಾರಂಭದಲ್ಲಿ ಪಾಲ್ಗೊಂಡಿದ್ದರು.



Managing Editor : Swami Muktidananda
Editor : Swami Vireshananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.D-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಪ್ರವಾಸ 2014 ರೈಲು ಹಾಗೂ ಬಸ್ಸಿನಲ್ಲಿ

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ

### ದಕ್ಷಿಣ ಭಾರತ : 10 ದಿನಗಳು — May 09

ಗುರುವಾಯೂರ್, ಕಾಲಡಿ, ತಿರುವನಂತಪುರ, ಸುಚೀಂದ್ರಂ, ಕನ್ಯಾಕುಮಾರಿ, ರಾಮೇಶ್ವರಂ, ಮಧುರೈ, ತಿರುಚಿ, ಶ್ರೀರಂಗಂ, ತಂಜಾವೂರ್, ಕುಂಭಕೋಣಂ, ಚಿದಂಬರಂ, ತಿರುವಣ್ಣಾಮಲೈ, ನವಗ್ರಹ

### ಅಮರನಾಥ್ - ವೈಷ್ಣವಿ ದೇವಿ : 19 ದಿನಗಳು — June 25 July 01

### ಕಾಶಿ - ನೇಪಾಳ (ಮುಕ್ತಿನಾಥ್) : 16 ದಿನಗಳು — Oct 05

ಕಾಶಿ, ಅಯೋಧ್ಯಾ, ಕಠ್ಮಂಡು, ಪೋಖ್ರಾ, ಮುಕ್ತಿನಾಥ್ (Optional), ಮನೋಕಾಮನ, ಘೋರಖ್‌ಪುರ್

### ಶಕ್ತಿಪೀಠಗಳು ಮತ್ತು ಸಿಮ್ಲಾ ಮನಾಲಿ ಸ್ಪೆಷಲ್ : 20 ದಿನಗಳು — Sep 01, Oct 02

ಚಂಡೀಘರ್, ಸಿಮ್ಲಾ, ಕುಫ್ರಿ, ಕುಲು ಮನಾಲಿ, ರೋತಾಂಗ್ ಪಾಸ್ (Optional), ವಶಿಷ್ಠ, ಬೈಜ್‌ನಾಥ್, ಚಾಮುಂಡ, ನೈನಾದೇವಿ, ಖಾಂಗ್ಡಾ, ಚಿಂತಪೂರ್ಣಿ, ಜ್ವಾಲಾಮುಖಿ, ಧರ್ಮಶಾಲಾ, ವೈಷ್ಣವೀದೇವಿ, ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ಕುರುಕ್ಷೇತ್ರ, ಶಾಕಂಬರಿ, ಹರಿದ್ವಾರ, ನವದೆಹಲಿ

### ಕೋಲ್ಕತ್ತಾ - ಡಾರ್ಜಿಲಿಂಗ್ - ಪೂರಿ : 16 ದಿನಗಳು — Oct 25, Nov 08

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್

### ಕಾಶಿ - ಗಯಾ - ಪ್ರಯಾಗ್ : 12 ದಿನಗಳು — Oct 27, Nov 06

ಅಲಹಾಬಾದ್, ಗಯಾ, ಬುದ್ಧಗಯಾ, ಕಾಶಿ, ಸಾರಾನಾಥ್, ಅಯೋಧ್ಯಾ

### ದ್ವಾರಕ ಮತ್ತು ಅಷ್ಟ ಜ್ಯೋತಿರ್ಲಿಂಗ : 24 ದಿನಗಳು — Oct 27, Nov 17

ಪುಷ್ಕರ, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ಶಿರಡಿ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್




## ಶ್ರೀ ಹನ್ಸಾ ಟ್ರಾವೆಲ್ಸ್

## SHRI HANSAA TRAVELS

**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.

☎: (080) 26543891 / 26643276 Mobile : (0) 9341415612 / 9341215612

e-mail : hansaatravels@gmail.com web : www.hansaatravels.com

